# ಜೈ ವಿದ್ಯಾರ್ಥಿ

ವಿಶ್ವ–ರಾಷ್ಟ್ರ–ಸಂಸ್ಕೃತಿ
ಸ್ವದೇಶ–ಸ್ವಭಾಷೆ–ಗತ್ ಸಾಹಿತ್ಯ
ಪರಿಜ್ಞಾನಗಳ ವ್ರತದಿಂದೆ–

ಸತ್ಯ–ಶಿಸ್ತು–ಶಕ್ತಿ–ಶಾಂತಿ
ಜ್ಞಾನ–ವಿಜ್ಞಾನ–ಸುಜ್ಞಾನ
ಅಭಿಜ್ಞಾನಗಳ ಪ್ರೇಮದಿಂದೆ–

ವಿಶ್ವಶಾಂತಿಯ–ವಿಶ್ವಪಂಥದಿ
ವಿಶ್ವಪಾತ್ರಿ–ವಿಶ್ವವೀಥಿ ಮೆಟ್ಟಿ
ವಿಶ್ವಜೀವನೀ ಪಾತ್ರವಾಗೆ–

ಅಂತೇವಾಸಿಗಳ ಸರ್ವೋದ್ಧಾರ!
ಸಂಜೀವನಾ ಪರಮಪಾವನಾ
ಜೈ ವಿದ್ಯಾರ್ಥಿ! ಜೈ ವಿದ್ಯಾಧನ!

# ಕಲ್ಯಾಣಿ ರಾಗಿಣಿ

**ಮಲ್ಲಿಕಾ**

ಮಡಿಕೆಯಲ್ಲಿ ಏನಾದರೂ
ಇದ್ದರೆ ತಾನೇ ಸೌಟನಲ್ಲಿ
ಬರಬೇಕಾದರೆ ಎಂಬುದು
ಎಂದಿಗೂ ಸತ್ಯ ಸಂಪದ

Kalyani Ragini in Kannada by 'Mallika'
Published by Lakshmi Prakashana,
170, Langford Road, Bangalore-560 025.

ಪ್ರಥಮ ಮುದ್ರಣ : ೧೯೯೧



ಬೆಲೆ : ಹತ್ತು ರೂಪಾಯಿಗಳು

ಮುದ್ರಕರು :
ನ್ಯೂ ಐಡಿಯಾಸ್
ನಂ. 30, 15ನೇ ಮುಖ್ಯ ರಸ್ತೆ
ಮೂರನೆಯ ವಿಭಾಗ, ಜಯನಗರ
ಬೆಂಗಳೂರು—560 011

॥ ಶ್ರೀ ಗಣೇಶ ಪಾದಾರ್ಪಣಮಸ್ತು ॥

# ಕಲ್ಯಾಣಿ ರಾಗಿಣಿ

**ಮಲ್ಲಿಕಾ**

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್
ಬೆಂಗಳೂರು–560 025

## ಪರಿವಿಡಿ

# ನಿವೇದನೆ

ನನ್ನ ಮುದ್ದು ಮಕ್ಕಳೇ

ನಿಮಗಾಗಿ, ನಿಮ್ಮ ಮನೋವಿಕಾಸಕ್ಕಾಗಿ ಮತ್ತು ಮನರಂಜನೆಗಾಗಿ ಕಲ್ಯಾಣಿ ರಾಗಿಣಿ ಸೃಷ್ಟಿಯಾಗಿದೆ. ಇಂತಹ ಪುಟ್ಟಪುಟ್ಟ ಕಥಾ ಸಂಕಲನಗಳನ್ನು ಓದಿ ಮನನ ಮಾಡುವುದರಿಂದ ಎಳೆ ಮನಸ್ಸಿಗೆ ಆಹ್ಲಾದ ಉಂಟಾಗಿ ಬುದ್ಧಿ ವಿಕಾಸವಾಗುವುದು ಸಹಜ. ಆದ್ದರಿಂದ ನೀವು ಹೆಚ್ಚುಹೆಚ್ಚಾಗಿ ಶಿಶು ಸಾಹಿತ್ಯವನ್ನು ಓದುವುದು ತುಂಬಾ ಒಳ್ಳೆಯದು. ಮನರಂಜನೆಯಿಂದ ಮನಃ ಬುದ್ಧಿಗಳು ಹಗುರವಾಗುತ್ತವೆ. ಆಸೆ–ಆಕಾಂಕ್ಷೆಗಳು ಪುಟಿಪುಟಿಯುತ್ತವೆ. ಜೀವ ತಣಿದು ಸಂತೋಷ ಮೂಡುತ್ತದೆ. ಆದ್ದರಿಂದ ಒಳ್ಳೊಳ್ಳೆಯ ಕಥೆಗಳನ್ನು ಓದಿ ಸಕ್ಕರೆಯ ಸವಿಯನ್ನು ಪಡೆಯಿರಿ.

ಪ್ರಜಾಪತಿ ಸಂವತ್ಸರದ ಜ್ಯೇಷ್ಠ ಶುಕ್ಲ ಬಿದಿಗೆ ಶುಕ್ರವಾರ

ಮಲ್ಲಿಕಾ
೧೪–೬–೧೯೯೧

# ಜಾನಿದಿತ್

ಬಹಳ ಹಿಂದೆ ಕೊರಿಯಾ ದೇಶದಲ್ಲಿ ಶ್ಯಾಮಿಲ್ ಲ್ಯಾಂಡ್ ಎಂಬುದೊಂದು ಹಳ್ಳಿ ಇತ್ತು.

ಹಳ್ಳಿ ಅಂದರೆ ಹಳ್ಳಿ. ಅಲ್ಲಿ ಯಾವ ಉಪ ಕಸುಬು ಗಳೂ ಹುಟ್ಟಿಕೊಂಡಿರಲಿಲ್ಲ. ಶ್ರೀಮಂತರ ಮಕ್ಕಳು ಕೋಚ್ ಗಾಡಿಯಲ್ಲಿ ಶಾಲೆಗಳಿಗೆ ಹೋಗುತಿದ್ದರು. ಬಡವರ ಮಕ್ಕ ಳಿಗೆ ದನಗಾಹಿತನ ಕಟ್ಟಿಟ್ಟ ಕಸುಬು.

ಆ ಹಳ್ಳಿಯಲ್ಲಿ ಒಬ್ಬ ದನಗಾಹಿ ಹುಡುಗ. ಹೆಸರು ಜಾನಿದಿತ್. ಅವನು ಶಾಲೆಗೆ ಹೋದವನಲ್ಲ, ಅಕ್ಷರ ಕಲಿತವ ನಲ್ಲ. ಶ್ರೀಮಂತರ ಮಕ್ಕಳು ಕೋಚ್ ಗಾಡಿಯಲ್ಲಿ ಪಯಣಿ ಸುವುದನ್ನು ನೋಡಿದರೆ ತಾನೂ ಕೋಚ್‌ಗಾಡಿಯಲ್ಲಿ ಪಯ ಣಿಸಬೇಕು, ಎಂಬ ಆಸೆ ಮನದಲ್ಲಿ. ಆದರೆ, ಅವರು ಕಲಿ ಯುವ ವಿದ್ಯೆಯ ಕಡೆ ಗಮನವೇ ಇರಲಿಲ್ಲ. ಅವನು ತೀರಾ ಬಡವ. ಅಪ್ಪನ ಸಂಪಾದನೆಯೆಲ್ಲ ಕುಡಿತ ಜೂಜುಗಳಿಗೆ ವ್ಯಾಸಲು. ತಾಯಿಯ ಕೂಲಿಯಿಂದ ಮೂವರ ಜೀವನ ಸಾಗುವುದೆಂದರೆ ಕಷ್ಟವೇ. ಆದ್ದರಿಂದ ಮಗನನ್ನು ದನಗಾಹಿ ತನಕ್ಕೆ ಕಳುಹಿಸಿದಳು ತಾಯಿ.

ಜಾನಿದಿತ್ ಹುಲ್ಲು ಸಮೃದ್ಧಿಯಾಗಿ ಬೆಳೆದ ಬಯಲಿಗೆ ದನಗಳನ್ನು ಹೊಡೆಯುತಿದ್ದ. ಅವುಗಳ ಹೊಟ್ಟೆ ಒಪ್ಪೊತ್ತಿಗೇ ತುಂಬುತಿತ್ತು.. ಆ ಕೆಲಸ ಬಹಳ ಕಷ್ಟವೆನಿಸಲಿಲ್ಲ ಹುಡುಗನಿಗೆ. ದುಷ್ಟ ಪ್ರಾಣಿಗಳ ಕಾಟವು ಇಲ್ಲದುದರಿಂದ ನಿರ್ಭಯ. ಆದರೂ ಮನೆಯ ಸಾಕುನಾಯಿ ಅವನೊಂದಿಗೆ ಇರುತಿತ್ತು. ಅದರೊಂದಿಗೆ ಚೆಲ್ಲಾಟವಾಡುತಿದ್ದ ಜಾನಿದಿತ್. ಹೊತ್ತು ಸರಾಗವಾಗಿ ಕಳೆಯುತಿತ್ತು ಬಯಲಲ್ಲಿ.

ದಿನವೂ ಹಳ್ಳಿಯಿಂದ ಹಳ್ಳಿಗೆ ಪಯಣಿಸುವ ದೊರೆಗಳು ಸೊಗಸಾಗಿ ಉಣ್ಣೆ ಬಟ್ಟೆಗಳನ್ನು ತೊಟ್ಟು ಕುದುರೆ ಸವಾರಿ ಮಾಡುವುದು ದೃಷ್ಟಿಗೆ ಬೀಳುತಿತ್ತು. ಹುಡುಗನಿಗೆ ಅವರನ್ನು ನೋಡುವಾಗಲೆಲ್ಲ ಮುಖ ಬಾಡಿ ಹೋಗುತಿತ್ತು. ಅವರಂತೆ ಕುದುರೆಯ ಮೇಲೆ ನಾನು ಪಯಣಿಸಲಾರೆನಲ್ಲ ಎಂಬುದೇ ಪರಿತಾಪ, ಸಂಕಟ, ಅವನಿಗೆ

ಒಬ್ಬ ದೊರೆಯಂತೂ ತಪ್ಪದೆ ಬಯಲನ್ನು ದಾಟಿ ಹೋಗಿ ಬರುತಿದ್ದ, ಅವನು ಹೋಗುವಾಗ ಮಾತ್ರ ಸಿಗುತಿದ್ದ. ಬರುವಾಗ ಹುಡುಗ ಮನೆಗೆ ಹಿಂದಿರುಗಿರುತಿದ್ದುದರಿಂದ ದೃಷ್ಟಿಗೆ ಬೀಳುತ್ತಿರಲಿಲ್ಲ. ಅವನ ಮೋಜುವಾನಿ ಅತಿಯಾದುದೇ. ಹ್ಯಾಟು ಬೂಟು ಫರ್ ಕೋಟುಗಳಿಂದ ಅಲಂಕೃತನಾಗಿರುತಿದ್ದ. ಅವನಿಗೆ ಈ ಚಿಕ್ಕ ಹುಡುಗನನ್ನು ನೋಡುವಾಗಲೆಲ್ಲ ಕರುಣೆ ಉಕ್ಕುತಿತ್ತು. ದೃಷ್ಟಿಸಿ ನೋಡದೆ ಹೋಗುತ್ತಿರಲಿಲ್ಲ.

ಒಮ್ಮೆ ಅವನು ಕುದುರೆಯಿಂದ ದೊಪ್ಪನೆ ನೆಗೆದು ಬಳಿಗೆ ಬಂದ. ಹುಡುಗನಿಗೆ ಅವನನ್ನು ನೋಡಿ ಸ್ವಲ್ಪ ಭಯ

ಆಯಿತು. ಏಕೆ ಬಂದ ಎಂಬುದು ಅರ್ಥವಾಗದೆ ಮಿಕಿಮಿಕಿ ನೋಡಿದ. ಕಣ್ಣುಗಳಲ್ಲಿ ಭಯದ ಛಾಯೆ ಮೊಳೆಯಿತು. ಮುಖಬಿಂಬವೂ ಬಣ್ಣಗೆಟ್ಟಿತು. ಅವನು ಹುಡುಗನ ಮನಃಸ್ಥಿತಿಯನ್ನು ಅರಿತು ಮೃದುವಾದ ದನಿಯಲ್ಲಿ ಕೇಳಿದ,

"ಮಗೂ, ನಿನ್ನ ಹೆಸರೇನು ?"

ಆಗ ಹುಡುಗನಿಗೆ ಸ್ವಲ್ಪ ಧೈರ್ಯ ಮೂಡಿತು. ಉತ್ತರಿಸಿದ "ನನ್ನ ಹೆಸರು ಜಾನಿದಿತ್."

"ನೀನು ಏಕೆ ಸಪ್ಪಗಿದ್ದಿ ಮಗೂ ?"

ಹುಡುಗ ಮಾತಾಡದೆ ಮಿಕಿಮಿಕಿ ನೋಡಿದ.

"ನಿನಗೆ ತಾಯಿ ತಂದೆಗಳಿದ್ದಾರೆಯೇ ?"

"ಹೌದು...ಇದ್ದಾರೆ."

"ಏನು ಮಾಡುತ್ತಿದ್ದಾರೆ ?"

"ಕೂಲಿ ಕೆಲಸ ಮಾತ್ರ..."

ಕುದುರೆ ಸವಾರ ಹುಡುಗನ ಮ್ಲಾನ ಮುಖವನ್ನು ನೋಡಿ ಕರುಣೆಯಿಂದ ಕೇಳಿದ,

"ನಿನ್ನ ದನಗಾಹಿತನ ನಿನಗೆ ಸುಖ ಕೊಡುತ್ತದೆಯೆ ?"

"ಇಲ್ಲ..."

ಜಾನಿದಿತ್ ತಲೆಯಾಡಿಸುತ್ತ ನಿಧಾನಗತಿಯಲ್ಲಿ ನುಡಿದ.

"ನಿನ್ನ ಮುಖವೇಕೆ ಬಾಡಿದೆ ?"

"ನಾನು ತುಂಬಾ ಬಡವ. ಹೊಟ್ಟೆ ಬಟ್ಟೆಗಳಿಗೆ ಹಣ ವಿಲ್ಲ. ಹೆಚ್ಚು ಸಂಪಾದಿಸುವ ವಿಧಾನ ತಿಳಿಯದು. ಅದಕ್ಕೇ..." ಮುಂದೆ ಮಾತು ಹೊರಡಲಿಲ್ಲ.

"ನಿನಗೆ ಹೆಚ್ಚು ಹಣ ದೊರೆತರೆ ಸಂತೋಷಗೊಳ್ಳುತ್ತಿ ತಾನೇ ?"

"ಹೌದು...ಸರ್."

"ಹಾಗಾದರೆ ನಾನೇ ನಿನಗೆ ಹಣಕೊಡುವೆ. ಇದರಿಂದ ನಿನ್ನ ಸುಖ ಸಂಪತ್ತನ್ನು ಪಡೆದುಕೊ...."

ಶ್ರೀಮಂತ ಜೇಬಿನಿಂದ ನೋಟುಗಳ ಕಟ್ಟೊಂದನ್ನು ತೆಗೆದು ಅವನ ಕೈಗೆಕೊಟ್ಟು ತಕ್ಷಣವೇ ಮಿಂಚಿನಂತೆ ಕುದುರೆ ಯನ್ನೇರಿ ಹೊರಟುಹೋದ. ಕುದುರೆ ಗಳಿಗೆಯೊಳಗಾಗಿ ಕಣ್ಮಾಯವಾಯಿತು.

ಜಾನಿದಿತ್ ನೋಟುಗಳ ಕಂತೆಯನ್ನು ಆಶ್ಚರ್ಯ-ಸಂತೋಷಗಳಿಂದ ಎದೆಗೊತ್ತಿಕೊಂಡ. ಅವನೆಂದೂ ಅಷ್ಟು ಹಣವನ್ನು ಕಣ್ಣಿಂದ ಕಂಡೇ ಇರಲಿಲ್ಲ. ಅದನ್ನು ಏನು ಮಾಡಲಿ ? ಎಲ್ಲಿ ಇಡಲಿ ? ಹೇಗೆ ಉಪಯೋಗಿಸಲಿ ? ಎಂಬ ಪ್ರಶ್ನೆಗಳು ಮೇಲಿಂದಮೇಲೆ ಎದ್ದುವು. ಯಾರಾದರೂ ದುಷ್ಟರು ಕಂಡರೆ ಬಿಟ್ಟಾರೆಯೇ ? ನನ್ನನ್ನು ಬಡಿದು ಹಣ ಕಸಿಯುತ್ತಾರೆ ಎನಿಸಿತು.

ಭಯದಿಂದ ಸುತ್ತಮುತ್ತಲೂ ನೋಡಿದ. ಸಧ್ಯ, ಯಾರೂ ಅಲ್ಲಿ ಇರಲಿಲ್ಲ. ಹಣದ ಕಟ್ಟನ್ನು ಅಂಗಿಯೊಳಗೆ

ಬಚ್ಚಿಟ್ಟುಕೊಂಡ. ಹಸುಗಳನ್ನು ಮೇಯಿಸುವಷ್ಟು ಸಹನೆಯೂ ಉಳಿಯಲಿಲ್ಲ. ಆದರೇನು ಅಷ್ಟೊಂದು ಹಣವನ್ನು ಮನೆಗೊಯ್ಯಲು ಭಯ. ಕುಡುಕ ತಂದೆ ಹಣ ಕಂಡರೆ ಬಿಟ್ಟಾನೆಯೇ? ಇಲ್ಲೆಲ್ಲಾದರೂ ಬಚ್ಚಿಟ್ಟುಕೊಂಡು ದಿನವೂ ಅಷ್ಟಿಷ್ಟು ಬಳಸಿಕೊಳ್ಳುವುದು ಒಳ್ಳಿತು ಎನಿಸಿತು. ಕೂಡಲೇ ಅಲ್ಲೆಲ್ಲಾ ಹುಡುಕಾಡಿದ. ಮರದ ಪೊಟರೆ ಕಲ್ಲುಗಳ ಗವಿ ಏನಾದರೂ ಇದೆಯೇ ಎಂದು. ಎಲ್ಲೂ ಕಾಣಲಿಲ್ಲ. ಹುಡುಕುತ್ತಲೇ ಮುಂದುವರಿದ. ಅಂತಹ ಗುಪ್ತ ಸ್ಥಳ ಕಾಣಲೇ ಇಲ್ಲ. ಯಾರಾದರೂ ನೋಡಿಯಾರು ಎಂಬ ಬೆರಗು ನೋಟ ನೋಡುತ್ತಲೇ ಇತ್ತು ಸುತ್ತಮುತ್ತ.

ಹಾದಿಗರಾರಿಗೂ ಇವನತ್ತ ಗಮನ ಹರಿಯಲಿಲ್ಲ.
ದನಗಳು ನಿಧಾನವಾಗಿ ಮನೆಯ ಕಡೆ ಚಲಿಸುತಿದ್ದವು.
ನಾಯಿ ಕುಂಯಿಕುಂಯೀ ಎಂದು ಹಿಂಬಾಲಿಸುತಿತ್ತು.

ಜಾನಿದಿತ್ ದನಗಳಿಗೆ ಹುಲ್ಲು ಕೀಳುವಂತೆ ನಟಿಸುತ್ತ ಒಂದು ಚಿಕ್ಕ ಗವಿಯನ್ನು ಕಂಡುಕೊಂಡ. ಅದನ್ನು ನೋಡಿದೊಡನೆಯೇ ಹುಡುಗನಿಗೆ ಸಮಾಧಾನವಾಯಿತು. ಹಣದ ಗಂಟನ್ನು ಒಳಗಡೆಯಿಟ್ಟು ಅದರ ಬಾಯಿಗೊಂದು ಕಲ್ಲನ್ನು ಮುಚ್ಚಿದ. ಗವಿಯನ್ನು ಗುರುತಿಸುವುದಕ್ಕಾಗಿ ಪಕ್ಕದಲ್ಲಿ ಒಲೆಯಾಕಾರದಲ್ಲಿ ಮೂರು ಕಲ್ಲುಗಳನ್ನು ಜೋಡಿಸಿಟ್ಟು ಎಡಪಕ್ಕದ ಗಿಡದ ಟೊಂಗೆಯೊಂದನ್ನು ಅರ್ಧಮುರಿದು ನೇತು ಬೀಳಿಸಿದ. ಅವೆರಡು ಎಡಬಲಗಳಲ್ಲಿದ್ದುದರಿಂದ ಗುರುತಿಸುವುದು ಸುಲಭ. ಹಣವನ್ನು ಬಚ್ಚಿಟ್ಟನಂತರ ಮನಸ್ಸಿಗೆ

ಎಷ್ಟೋ ನೆಮ್ಮದಿ. ಆದರೂ ಯಾರಾದರೂ ನೋಡಿದರೆ ಗತಿಯೇನು ಎಂಬ ಭಯ ಇದ್ದೇ ಇತ್ತು.

ಜಾನಿದಿತ್ ಬೆಳಗ್ಗೆ ಎದ್ದಾಗಲೇ ಹಣವಿಟ್ಟಿದ್ದ ತಾಣಕ್ಕೆ ಹೋದ. ತಾನು ಮುಚ್ಚಿಟ್ಟಿದ್ದ ಕಲ್ಲು ಎಡ ಬಲಗಳಲ್ಲಿ ಮಾಡಿದ್ದ ಗುರುತುಗಳು ಹಾಗೇ ಇದ್ದುವು. ನೋಡಿಕೊಂಡು ಹಾಗೇ ಹಿಂದಿರುಗಿದ.

ಹಗಲು ಹೊತ್ತಿನಲ್ಲಿ ದನಗಳನ್ನು ಕೊಟ್ಟಿಗೆಗೆ ಕೂಡಿಸಿದ ಬಳಿಕ ಸ್ವಲ್ಪ ಹಣವನ್ನು ತೆಗೆದುಕೊಳ್ಳಲು ಗವಿಗೆ ಹೋದ. ಕಲ್ಲನ್ನು ಬಾಯಿಂದ ಸರಿಸಿದರೆ ಒಳಗಡೆ ನಾಗರ ಹಾವೊಂದು ಸೇರಿಕೊಂಡಿದ್ದು ಬುಸ್ಸನೆ ತಲೆಯೆತ್ತಿತು. ಕೂಡಲೇ ಎದೆ ದಸಕ್ ಎಂದಿತು ಹುಡುಗನಿಗೆ. ಅಬ್ಬಾ ! ಈಗ ಏನು ಗತಿ !

ಹುಡುಗ ಭಯ ಭೀತನಾದರೂ ದೂರನಿಂತು "ಹುಷ್ ಹುಷ್ !" ಎನ್ನುತ್ತ ಅದನ್ನು ಓಡಿಸಲು ಪ್ರಯತ್ನಿಸಿದ. ಒಂದೆರಡು ಕಲ್ಲುಗಳನ್ನೂ ಒಗೆದ. ಬಹಳ ಪ್ರಯತ್ನಿಸಿದ ಮೇಲೆ ಸ್ವಲ್ಪ ಹಿಂಜರಿಯಿತು ಹಾವು. ಒಳಗಣ ಯಾವುದೋ ಮೂಲೆಯಲ್ಲಿ ಅಡಗಿ ನುಸುಳಿಕೊಂಡಿತು. ಕೂಡಲೇ ಹಣದ ಥೈಲಿಯನ್ನು ತೆಗೆದು ಸ್ವಲ್ಪ ಮಾತ್ರ ಹಣವನ್ನು ತೆಗೆದು ಕೊಂಡು ಉಳಿದುದನ್ನು ಯಥಾಪ್ರಕಾರ ಅದರಲ್ಲೇ ಇಟ್ಟು ಬಾಯಿಯನ್ನು ಮುಚ್ಚಿ ಭದ್ರ ಪಡಿಸಿದ. ಇಡಲೇ ? ಬಿಡಲೇ ಎಂಬ ಅನುಮಾನವೂ ಇತ್ತು. ಆದರೆ, ಅದಕ್ಕಿಂತ ಉತ್ತಮ ವಾದ ಸ್ಥಳ ಎಲ್ಲೂ ಕಂಡಿರಲಿಲ್ಲ. ಹುಡುಗ ವಿಧಿಯಿಲ್ಲದೇ ಅದೇ ಸ್ಥಳವನ್ನು ಒಪ್ಪಿಕೊಂಡು ಅಲ್ಲಿಂದ ಹೊರಟ.

ಹಳ್ಳಿಗೆ ಹಿಂದಿರುಗಿದಾಗ ಸೂರ್ಯ ಇಳಿಮುಖನಾಗಿದ್ದ. ಬರ್ಚ್‌ವುಡ್ ಮರಗಳ ತೋಪಿನಲ್ಲಿ ನಾಲ್ಕಾರು ಮಂದಿ ಇಸ್ಪೀಟು ಆಟ ಆಡುತ್ತಿದ್ದರು. ಸಲಸಲಕ್ಕೂ ಆಟ ಕಳೆಯೇರುತ್ತಿತ್ತು. ಅವರೊಡನೆ ಕೂಡಿಕೊಂಡ ಜಾನಿದಿತ್. ಅವನು ಆಟದಲ್ಲಿ ನುರಿತವನಲ್ಲ. ಪೂರ್ತಿ ಹಣವೂ ಕೈ ಬಿಟ್ಟಿತು. ಹುಡುಗ ಪೆಚ್ಚು ಮೋರೆಯಿಂದ ಮನೆಗೆ ಹೋದ. ಆದರೂ ತಾಯಿ-ತಂದೆಗಳಿಗೆ ಹಣದ ಸುದ್ದಿ ಬಿಡಲಿಲ್ಲ.

ಆಟದಿಂದ ಹೆಚ್ಚು ಹಣ ಸಂಪಾದಿಸುವೆ ಎಂದು ಭಾವಿಸಿದ್ದು ತಪ್ಪಾಗಿತ್ತು. ಆದರೂ ಆ ಚಟ ಹೋಗಲಿಲ್ಲ. ಎರಡು ಮೂರು ದಿನಗಳು ಹೀಗೆಯೇ ಕಳೆದುವು. ಜಾನಿದಿತ್ ಸಲಸಲವೂ ಸೋಲುತ್ತಿದ್ದ. ಹಣದ ಗಂಟು ಬಹುಬಾಗ ಕರಗಿತು. ಮನದ ನೋವು ಕಳೆಯಲು ಹಣದ ಕೊನೆಯ ಅಂಶವನ್ನು ಕುಡಿತಕ್ಕಾಗಿ ಬಳಸಿದ. ಕುಡಿತ ದುಶ್ಚಟವಾಗಿ ಅಂಟಿತು. ಕಟ್ಟಕಡೆಗೆ ಹಣದ ಥೈಲಿ ಪೂರಾ ಕರಗಿತು. ಕುಡಿತ ಮತ್ತು ಜೂಜಾಟದ ದುಶ್ಚಟಗಳು ರಕ್ತಕ್ಕೆ ಅಂಟಿದಂತೆ ಕಾಡತೊಡಗಿದುವು. ಹುಡುಗ ಕಂಗಾಲಾದ. ಬದುಕು ಬಲೂ ಕಷ್ಟವೆನಿಸಿತು. ದನಗಳೊಡನೆ ಜೋಲುಮುಖ ಮಾಡಿಕೊಂಡು ಬಯಲಿಗೆ ಹೋದ. ಬಹಳ ದಿನಗಳಂತರ ಅದೇ ಗೃಹಸ್ಥ ಕುದುರೆಯ ಮೇಲೆ ಕಾಣಿಸಿಕೊಂಡ. ಹುಡುಗನನ್ನು ಕಂಡಕೂಡಲೇ ಅವನು ಕುದುರೆಯಿಂದ ದೊಪ್ಪನೆ ಕೆಳಕ್ಕೆ ಇಳಿದು ಸಮೀಪಕ್ಕೆ ಬಂದ.

"ಜಾನಿದಿತ್, ಹೇಗಿದ್ದೀ? ಈಗ ಸುಖವಾಗಿರುವೆಯಾ?"

"ಇಲ್ಲ...ಸರ್ !"

"ಏಕೆ ? ಹಣವನ್ನು ಏನು ಮಾಡಿದೆ ?"

ಹುಡುಗ ಕಣ್ಣೀರಿಡುತ್ತ ಅಪವ್ಯಯವನ್ನು ಹೇಳಿಕೊಂಡ.

"ಹಾಗಾದರೆ, ನೀನು ಹಣದಿಂದ ಸಂತೋಷ ಪಡಲಿಲ್ಲವೇ ?"

"ಇಲ್ಲ ಸರ್...! ಅದಕ್ಕೆ ಪ್ರತಿಯಾಗಿ ದುಃಖಪಟ್ಟೆ."

"ಮೈ ಬಾಯ್ ! ಕೇಳು, ಬರೀ ಹಣವನ್ನು ಹೊಂದುವುದರಿಂದ ಸಂತೋಷ ಬರುವುದಿಲ್ಲ." ಹಣದ ಸದುಪಯೋಗವನ್ನು ಅರಿತುಕೊಳ್ಳಬೇಕು. ಹಣ ಸುಖ-ದುಃಖಗಳೆರಡನ್ನೂ ಕೊಡುತ್ತದೆ. ಆದ್ದರಿಂದ ನಾವು ಹಣದ ವಿನಿಯೋಗವನ್ನು ಯೋಚಿಸಿ ಬುದ್ಧಿವಂತಿಕೆಯಿಂದ ಉಪಯೋಗಿಸಿಕೊಳ್ಳಬೇಕು. ನೀನು ವಿದ್ಯೆ ಬುದ್ಧಿಯನ್ನು ಮೊದಲು ಬೆಳೆಸಿಕೊಂಡರೆ ಅನಂತರ ಹಣದ ಸದ್ವಿನಿಯೋಗ ತಿಳಿಯುತ್ತದೆ. ಮೊದಲು ಬುದ್ಧಿವಂತನಾಗುವುದಕ್ಕೆ ಪ್ರಯತ್ನಿಸು. ಅನಂತರ ಎಲ್ಲಾ ಕೈಗೂಡುತ್ತದೆ."

ಹುಡುಗನ ಬಾಯಿಯಲ್ಲಿ ಮಾತೇ ಹೊರಡಲಿಲ್ಲ, ಕಣ್ಣುಗಳಲ್ಲಿ ನೀರಾಡಿತು.

"ನೀನು ಬೆಳಗ್ಗೆ ದನಗಾಹಿತನ ನೋಡಿಕೊ. ಸಂಜೆಯ ಶಾಲೆಗೆ ಸೇರಿಕೊಂಡು ವಿದ್ಯೆ ಬುದ್ಧಿ ಕಲಿತು ಬುದ್ಧಿವಂತನಾಗು, ನಿನ್ನ ಪುಸ್ತಕ ಮತ್ತು ಶಾಲೆಯ ಶುಲ್ಕಗಳನ್ನು

ನಾನು ಕೊಡುವೆ. ನೀನು ಓದದೆ ಅನುತ್ತೀರ್ಣನಾದರೆ ನಾನು ಖಂಡಿತ ಹಣ ಕೊಡುವುದನ್ನು ನಿಲ್ಲಿಸಿ ಬಿಡುವೆ. ತಿಳಿಯಿತೇ ?

ಹುಡುಗ ಆನಂದ ತುಂದಿಲತೆಯಿಂದ ಒಪ್ಪಿಕೊಂಡು ವಂದಿಸಿದ.

ಜಾನಿದಿತ್ ಮರುದಿನವೇ ಶಾಲೆಯನ್ನು ಸೇರಿಕೊಂಡು ಓದತೊಡಗಿದ.

ಶ್ರೀಮಂತ ಹಣ ಕೊಡುತಿದ್ದುದರಿಂದ ಅಭ್ಯಾಸಕ್ಕೆ ಕೊರತೆ ಬರಲಿಲ್ಲ. ಹುಡುಗ ಬುದ್ಧಿವಂತನಾಗತೊಡಗಿದ. ವಿದ್ಯಾಭ್ಯಾಸದಿಂದ ಶ್ರದ್ಧೆ-ಬುದ್ಧಿಗಳು ಬೆಳೆಯುತಿದ್ದುವು. ಜ್ಞಾನವು ಅರಳುತಿತ್ತು ಜಾನಿದಿತ್ ಹುರುಪುಗೊಂಡ.

ಶ್ರೀಮಂತ ಹಣ ಕೊಡುವಾಗಲೆಲ್ಲ ಅವನ ಬುದ್ಧಿವಂತಿಕೆಯನ್ನು ಅರಿತುಕೊಂಡು ಸಂತುಷ್ಟನಾಗಿ ಹಿತವಾದ ಹೇಳುತಿದ್ದ.

ಹುಡುಗ ದನಗಾಹಿತನದೊಂದಿಗೇ ವಿದ್ಯೆ ಬುದ್ಧಿಗಳನ್ನು ಕಲಿತುಕೊಂಡು ಜಾಣ್ಮೆಯನ್ನು ಬೆಳೆಸಿಕೊಂಡ. ಮುಂದೆ ಸುಖ ಜೀವನ ನಡೆಸಿಕೊಳ್ಳುತ್ತ ಆನಂದದಿಂದಿದ್ದ.

— ೦ —

# ಕಿನ್ನರಿಯ ಕೃಪೆ

ಕೆನ್ಯಾ ದೇಶದಲ್ಲಿ ಮಾಗ್ಯೂಯೋ ಎಂಬುದೊಂದು ಸಣ್ಣ ಹಳ್ಳಿ.

ಅಲ್ಲಿರುವ ಹತ್ತಿಪ್ಪತ್ತು ಮನೆಗಳು ಒಂದಕ್ಕೊಂದು ಅಂಟಿರದೆ ಅಲ್ಲಲ್ಲಿ ವಿರಳವಾಗಿದ್ದು ಊರಿಗೊಂದು ಶೋಭೆ ತಂದಿದ್ದುವು. ಗಿಡಮರಗಳ ಮಧ್ಯೆ ಕಂಡೂ ಕಾಣದಂತೆ ಹುಗಿದಿದ್ದ ಮನೆಗಳಲ್ಲಿ ಜನ ತಣ್ಣಗೆ ವಾಸ ಮಾಡುತ್ತಿದ್ದರು. ಅವರಲ್ಲಿ ಗಿಲ್ಬರ್ಟ್ ಟೋನೀ ಎಂಬೊಬ್ಬ ಶ್ರದ್ಧಾವಂತ ರೈತನಿದ್ದ. ಎಲ್ಲರಂತೆ ತನ್ನಷ್ಟೇ ಕೆಲಸವನ್ನು ಮಾಡಿಕೊಂಡಿರುವುದು ಇಷ್ಟವಿರಲಿಲ್ಲಿ. ತನ್ನ ಹಳ್ಳಿಯಲ್ಲೇ ಯಾವ ರೀತಿಯಿಂದಲಾದರೂ ಸಾಮಾಜಿಕ ಸೇವೆ ಮಾಡಬೇಕೆಂಬ ಇಚ್ಛೆ ತುಂಬಾ ಇತ್ತು. ಯಾರಾದರೂ ಆಪತ್ತಿಗೊಳಗಾದರೆ ಮುಕ್ತ ಮನದಿಂದ ಸಹಾಯ ಮಾಡುತಿದ್ದ. ಆದರೂ ಅವನಿಗೆ ಸಂತೃಪ್ತಿ ಇರಲಿಲ್ಲ.

ರಾತ್ರಿ ಅವನಿಗೊಂದು ಕನಸು ಬಿತ್ತು. ಅದರಲ್ಲಿ ಅವನು ವೈದ್ಯನಾಗಿ ಚಿಕಿತ್ಸೆ ನೀಡುತಿದ್ದಾನೆ! ಜನಗಳು ಚಿಕಿತ್ಸೆಗಾಗಿ ಎಲ್ಲೆಲ್ಲಿಂದಲೋ ಬರುತಿದ್ದಾರೆ!

ಅರೆ! ಎಂತಹ ಆಶ್ಚರ್ಯ? ಮುಖ್ಯವಾಗಿ ತಾನು ವಿದ್ಯಾವಂತನೇ ಅಲ್ಲ! ಅಂದಮೇಲೆ ಎಲ್ಲಿಯ ಚಿಕಿತ್ಸೆ?

ಗಿಲ್ಬರ್ಟ್ ಟೋನೀ ಆಶ್ಚರ್ಯ ಚಕಿತನಾದುದು ಮಾತ್ರ ವಲ್ಲ. ವಿಚಾರಶೀಲನಾದ. ಹೇಗೆ ಇದರ ಸಾಧ್ಯತೆ ಎಂಬ ಯೋಚನೆಯೂ ಬಂತು. ಆ ಯೋಚನೆಯನ್ನು ನಿವಾರಿಸಲಾ ಗಲಿಲ್ಲ. ಸದಾ ಅದನ್ನೇ ಕುರಿತು ಯೋಚಿಸುತ್ತಲೇ ಇದ್ದ. ನಾನೊಬ್ಬ ವೈದ್ಯನಾಗಲೇಬೇಕು ಎಂಬ ಆಸೆ ಮೊಳೆಯಿತು ಮನದಲ್ಲಿ. ಆ ಹುಚ್ಚು ಆಸೆಯನ್ನು ನೆನೆದರೆ ತನಗೇ ನಗು ಬಿರುತಿತ್ತು.

o o o o

ಗಿಲ್ಬರ್ಟ್ ಟೋನೀ ಸಂಧ್ಯಾವಿಹಾರಕ್ಕೆಂದು ಹೊರ ಹೊರಟ.

ಊರಿನ ಹೊರವಲಯದಲ್ಲಿ ಮಹಾ ಪುಷ್ಕರಣಿ. ಅದರ ತೀರದಲ್ಲಿ ಸೂರ್ಯಾಸ್ತಮಾನೋತ್ಸವವನ್ನು ಗಮನಿಸುತ್ತಾ ಕುಳಿತ. ಅರುಣನ ಕನಕಕಾಂತಿ ಜಲರಾಶಿಯ ಮೇಲೆ ಹರಿದು ಓಕುಳಿಯಂತೆ ಥಳಥಳಿಸುತಿತ್ತು, ತುಳುಕಾ ಡುವ ನೀರು. ಗಿಲ್ಬರ್ಟ್ ಟೋನೀ ಆನಂದಿತನಾದ. ಮನ ಮತಿಗಳು ಧ್ಯಾನಮಯವಾದುವು.

ಸೂರ್ಯ ಮುಳುಗಿದ. ಮುಸ್ಸಂಜೆ ಕವಿಯತೊಡ ಗಿತು. ಹಕ್ಕಿಗಳು ಸಂಧ್ಯಾರಾಗ ಹಾಡಿದುವು. ತಂಗಾಳಿ ತಣ್ಣಗೆ ಒಯ್ಯೊಯ್ಯನೆ ಬೀಸಿತು. ಗಿಲ್ಬರ್ಟ್ ಟೋನೀ ಕುಳಿತೇ ಇದ್ದ. ಕೆರೆಯ ಮಧ್ಯ ಭಾಗದಲ್ಲಿ ಗುಳುಗುಳು ಸದ್ದು ಕೇಳಿಸಿತು. ಮೊಸಳೆಯಿರಬಹುದೆಂದು ಅತ್ತ ನೋಡು ತ್ತಲೇ ಇದ್ದಾನೆ ಟೋನೀ. ಕೆರೆಯ ಮಧ್ಯೆ ಕಾಣಿಸಿಕೊಂಡು ದುದು ಮೊಸಳೆಯಲ್ಲ; ಪುಷ್ಕರಣಿಯ ಕಿನ್ನರಿ. ಹಂಸೆಯಂತ

ಬಿಳಿಯ ಮೈ. ಬಿಳಿಯ ಉಡುಪು! ಗಿಲ್ಬರ್ಟ್ ಟೋನೀ ದಂಗು ಬಡಿದವನಂತೆ ಅತ್ತಲೇ ನೋಡುತಿದ್ದಾನೆ! ಅವಳು ನೆಲದ ಮೇಲೆ ನಡೆದಂತೆ ಸರಾಗವಾಗಿ ನಡೆದು ಬಂದಳು ನೀರಿನ ಮೇಲೆ. ನೋಡುನೋಡುತಿದ್ದಂತೆಯೇ ಸನಿಹಕ್ಕೆ ಬಂದೇ ಬಿಟ್ಟಳು! ಗಿಲ್ಬರ್ಟ್ ಟೋನೀ ಮಂಡಿಯೂರಿ ತಲೆ ಬಾಗಿ ವಂದಿಸಿದ. ಏನಾದರೂ ಹೇಳಬೇಕೆಂದರೆ ನಾಲಿಗೆಯೇ ಹೊರಳಲಿಲ್ಲ. ಅವಳೇ ಪ್ರೀತಿಯಿಂದ ನುಡಿದಳು "ಟೋನೀ! ಕೇಳು! ನಿನಗೆ ಜನಸೇವೆ ಮಾಡುವ ಆಸ್ಥೆ ತುಂಬಾ ಇದೆ. ಅಲ್ಲವೇ ? ಮಾಡು...ಮಾಡು"

"ಏನು ಮಾಡಬೇಕು ಅಪ್ಪಣೆಯಾಗಲಿ ತಾಯಿ !"

ಅವಳು ಆ ಕ್ಷಣವೇ ತನ್ನ ವರಹಸ್ತವನ್ನು ತಲೆಯ ಮೇಲಿಟ್ಟು ಅಂದಳು,

"ನಿನಗೆ ಒಳ್ಳೆಯದಾಗುತ್ತೆ !"

"ನಿನ್ನ ಪೂರ್ಣಕೃಪೆ ಬೇಕು."

ಅವನ ಮುಗಿದ ಕೈಗಳನ್ನು ಹಿಡಿದು "ನಿನ್ನ ಆಸೆ ಈಡೇರುತ್ತದೆ ಹೋಗು !" ಎಂದಳು. ಮರುಕ್ಷಣದಲ್ಲಿ ಅವಳು ಅಲ್ಲಿರಲಿಲ್ಲ! ಗಿಲ್ಬರ್ಟ್ ಟೋನೀ ಸಂತಸದಿಂದ ಉಬ್ಬಿ ಹೋದ. ಒಂದೆರಡು ಗಳಿಗೆ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಕತ್ತಲೆ ಕವಿಯುತಿದ್ದುದರಿಂದ ಹಿಂದಿರುಗಲೇಬೇಕಾಯಿತು. ಅಲ್ಲಿಂದ ಹೊರಟ. ಮನದ ತುಂಬೆಲ್ಲಾ ಕಿನ್ನರಿಯ ಚಿತ್ರ. ಮಾತ್ರವಲ್ಲ; ದಿವ್ಯ ಅನುಗ್ರಹವೂ ಲಭಿಸಿತ್ತು. 'ಆಸೆ ಈಡೇರುತ್ತೆ' ಎಂದಳಲ್ಲಾ ಏನಿರಬಹುದು? ಎಂಬ ಪ್ರಶ್ನೆ ತಲೆಯಲ್ಲಿ ನಿಮಿರಿ ನಿಂತಿತ್ತು.

ಗಿಲ್ಬರ್ಟ್ ಟೋನೀ ಹೊಲದಂಚಿನಲ್ಲಿ ನಡೆಯುತಿದ್ದಾಗ ಕರುವೊಂದು ಕಾಲು ಮುರಿದುಕೊಂಡು ನಡೆಯಲಾರದೆ ನಿಂತಿತ್ತು. ಮೂಕಪ್ರಾಣಿ ಹೇಳಿಕೊಳ್ಳಲಾರದು. ಕಣ್ಣುಗಳಲ್ಲಿ ಕಡು ನೋವಿನ ದೈನ್ಯತೆ ಕಾಣಿಸುತಿತ್ತು.

ಪಾಪ, ಹೇಗೆ ಮುರಿಯಿತೋ...ಎಂದುಕೊಳ್ಳುತ್ತ ಕಾಲಿನ ಮುರಿತವನ್ನು ಮುಟ್ಟಿ ಮುಟ್ಟಿ ಪರೀಕ್ಷಿಸಿದ.

ಅರರೆ ! ಏನಾಶ್ಚರ್ಯ !

ಅದರ ಕಾಲು ಕೂಡಿಕೊಂಡಿತು! ಮುರಿತದ ಕುರುಹು ಇಲ್ಲವೇ ಇಲ್ಲ, ಮತ್ತೆ ಮತ್ತೆ ಪುನಃಪುನಃ ಪರೀಕ್ಷಿಸಿ ನೋಡಿದ, ಕಾಲು ಸರಿ ಹೋಗಿತ್ತು. ಕರು ಅಲ್ಲಿಂದ ಓಡುತ್ತಲೇ ಹೋಯಿತು ಕೊಟ್ಟಿಗೆಗೆ !

ಗಿಲ್ಬರ್ಟ್ ಟೋನೀಯ ಜೀವಕ್ಕೆ ಸ್ವರ್ಗದ ಸೋಪಾನವೇರಿದಷ್ಟು ಸಂತಸ ಮೂಡಿತು. ಕಿನ್ನರಿಯನ್ನು ಮನಸಾ ವಂದಿಸಿದ.

ತನ್ನ ಮಗ ಹದಿನಾರು ವರ್ಷದ ರಾಬರ್ಟ್ ಟೋನೀ ಕಣ್ಣು ಬೇನೆಯಿಂದ ನರಳುತಿದ್ದ. ಎಷ್ಟೋ ಮಂದಿ ವೈದ್ಯರು ನೋಡಿ ಕೈ ಬಿಟ್ಟಿದ್ದರು. ಓದಿದರೆ ನೋವು ಹೆಚ್ಚುತಿದ್ದುದರಿಂದ ಓದು ಬಿಟ್ಟು ಮನೆಯಲ್ಲೇ ಉಳಿದಿದ್ದ. ಗಿಲ್ಬರ್ಟ್ ಟೋನೀ ಕೇಳಿದ ಇಂದು ಹೇಗಿದ್ದೀ ರಾಬರ್ಟ್ ?"

"ಕಣ್ಣುಗಳು ತುಂಬಾ ನೋಯುತ್ತಿವೆ."

ಗಿಲ್ಬರ್ಟ್ ಅಂದ "ಕಣ್ಣು ತೊಳೆದು ನೋಡೋಣ. ಧೂಳು ಏನಾದರೂ ಬಿದ್ದಿದ್ದರೆ ನೋವು ಕಾಣಿಸುತ್ತದೆ."

ರಾಬರ್ಟ್‌ನಿಗೆ ಎಂತೆಂತೆಹ ಡಾಕ್ಟರುಗಳು ನೋಡಿ ಕೈ ಬಿಟ್ಟಿರುವುದರಿಂದ ತಂದೆಯು ಮಾತಿನಲ್ಲಿ ನಂಬಿಕೆಯೇ ಉಳಿದಿರಲಿಲ್ಲ. ಆದರೂ, ತಂದೆಯು ಮಾತಿಗೆ ಮಣಿದ. ಗಿಲ್ಬರ್ಟ್ ಟೋನೀ ಮಗನ ಕಣ್ಣಿಗೆ ನೀರು ಬಿಟ್ಟು ಕೈಯಿಂದ ಸವರಿದ. ಆಗ ಕಂಡು ಬಂದ ಆಶ್ಚರ್ಯವೆಂದರೆ ಕಣ್ಣು ಗುಡ್ಡೆಯಿಂದ ಸಣ್ಣ ಸಾಸಿವೆಯಂತಹ ಮೂರು ನಾಲ್ಕು ಕಲ್ಲುಗಳು ಹೊರ ಬಿದ್ದುವು. ಅಂದೇ ಅವನು ನೋವಿನಿಂದ ಬಿಡುಗಡೆ ಹೊಂದಿದ. ಸುದ್ದಿ ಊರೆಲ್ಲಾ ಹರಡಿತು. ಪರೀಕ್ಷಾರ್ಥವಾಗಿ ಹೊಟ್ಟೆ ನೋವಿನಿಂದ ನರಳುತಿದ್ದ ಸಣ್ಣ ಹುಡುಗನನ್ನು ಯಾರೋ ಕರೆತಂದರು. ಗಿಲ್ಬರ್ಟ್ ಟೋನೀ ಹುಡುಗನನ್ನು ಮಂಚದ ಮೇಲೆ ಮಲಗಿಸಿಕೊಂಡು ಹೊಟ್ಟೆಯಮೇಲೆ ಮೃದುವಾಗಿ ಕೈಯಾಡಿಸಿದ. ಆಶ್ಚರ್ಯ...! ಹುಡುಗನ ಹೊಟ್ಟೆ ಹರಿದು ಅಪೆಂಡಿಸೈಟಿಸ್ ಹೊರಬಂತು. ಟೋನೀ ಅದನ್ನು ಹಿಸುಕಿ ಕೀವು ತೆಗೆದು ತೊಳೆದು ಒಳಗೆ ತಳ್ಳಿದ ಕೊಡಲೇ ಹೊಟ್ಟೆಯ ಚರ್ಮ ಕೂಡಿಕೊಂಡು ಹುಡುಗ ಗುಣ ಹೊಂದಿದ. ಸರಿ...ಸುದ್ದಿ ಮಿಂಚಿನಂತೆ ದೂರ ದೇಶಗಳಲ್ಲೂ ಹರಡಿತು. ಪರಿಸರದ ರಾಷ್ಟ್ರಗಳಿಂದ ರೋಗಿಗಳು ಸಾಲು ಗಟ್ಟಿ ಬರತೊಡಗಿದರು.

ಜಾನ್‌ಪೀಟರ್ ಎಂಬೊಬ್ಬ ಹುಡುಗ. ಮೊಣಕಾಲಿನಲ್ಲಿ ದೊಡ್ಡ ಬಾವೊಂದು ಎದ್ದು ಗಂಟಿನ ಒಳಗೆ ಕೀವು ರಕ್ತ ತುಂಬಿ ಬಾತುಕೊಂಡಿತ್ತು. ಹುಡುಗ ಪ್ರಾಣಾಂತಕ ನೋವಿನಿಂದ ನರಳುತಿದ್ದ. ಕಾಲು ಅಲುಗಿಸುವಂತಿರಲಿಲ್ಲ. ಹಾಸಿಗೆಯಲ್ಲಿ ಬಹುಕಾಲದಿಂದ ಕಾಲಹರಣ ಮಾಡಿದ್ದ. ಅಂತಹವ

ನನ್ನು ಸ್ಟ್ರೆಚರ್ ಮೇಲೆ ಹೊತ್ತು ತಂದರು ಇವನಲ್ಲಿಗೆ. ಗಿಲ್ಬರ್ಟ್ ಟೋನೀ ಹುಡುಗನ ಮೊಣಕಾಲಿನಮೇಲೆ ಮೃದುವಾಗಿ ಕೈಯಾಡಿಸಿದ. ತಕ್ಷಣವೇ ಬಾವು ಒಡೆದು ಕೀವು ಒಂದು ಮಿಳ್ಳೆಯಷ್ಟು ಸುರಿದುಹೋಯಿತು. ಕೂಡಲೇ ಗಿಲ್ಬರ್ಟ್ ಆ ಗಾಯವನ್ನು ತೊಳೆದು ಹತ್ತಿಯಿಂದ ಒರಿಸಿದಾಗಲೇ ಗಾಯ ಕೂಡಿಕೊಂಡಿತು. ಹುಡುಗ ಚೆನ್ನಾಗಿ ನಡೆದಾಡಿದ. ಅಲ್ಲಿದ್ದವರೆಲ್ಲಾ ನೋಡಿ ಆಶ್ಚರ್ಯಪಟ್ಟರು. ಗಿಲ್ಬರ್ಟ್ ಟೋನಿ ಆಜೀವ ಪರ್ಯಂತ ಜನಸೇವೆ ಮಾಡಿ ಧನ್ಯನಾದ.

— ೦ —

## ಶ್ರೇಷ್ಠ ಮಂತ್ರಿ

ಹಿಂದೆ, ಬಹಳ ಹಿಂದೆ ಧರ್ಮಪುರಿ ಎಂಬ ದೇಶದಲ್ಲಿ ಪುಣ್ಯವಂತನಾದ ಮಹಾರಾಜನಿದ್ದ.

ಅವನ ದೇಶ ಸಕಲ ಸಂಪತ್ ಭರಿತವಾಗಿತ್ತು. ದೊರೆಯ ರಾಜ್ಯಾಡಳಿತ ಸತ್ಯ-ಧರ್ಮ-ಸುಖ-ಶಾಂತಿಗಳಿಂದ ಕೂಡಿ ಪ್ರಜೆಗಳು ಸಂತೋಷದಿಂದ ಬಾಳುತಿದ್ದರು.

ರಾಜನ ಹೆಸರು ಸತ್ಯವ್ರತ. ತಂದೆಯ ಕಾಲದಿಂದಲೂ ಇದ್ದ ಶ್ರೇಷ್ಠಮಂತ್ರಿಯಿಂದ ರಾಜ್ಯಾಡಳಿತಕ್ಕೆ ಒಳ್ಳೆಯ ಹುರುಪು ಉತ್ಸಾಹಗಳಿದ್ದುವು. ಅವನು ಬರಬರುತ್ತ ತುಂಬ ಮುದುಕನಾಗಿ ಕೆಲಸ ನಿರ್ವಹಿಸಲಾರದೆ ಹೋದ. ಆರೋಗ್ಯವೂ ಕೆಡುತ್ತ ಬಂತು. ಆಗ ಅವನಾಗಿಯೇ ದೊರೆಯನ್ನು ಕುರಿತು ಇಂತೆಂದ,

"ಮಹರಾಜಾ, ಇನ್ನು ಮುಂದೆ ನೀನು ಬೇರೆ ಯಾರನ್ನಾದರೂ ಶ್ರೇಷ್ಠಮಂತ್ರಿಯನ್ನು ನೇಮಕಮಾಡಿಕೊಂಡು ರಾಜ್ಯಭಾರವನ್ನು ನಿರ್ವಹಿಸುವುದು ಒಳ್ಳೆಯದು. ಇಲ್ಲದಿದ್ದರೆ ನನಗೆ ತುಂಬಾ ಕಷ್ಟವಾಗುತ್ತೆ."

ಆದರೆ, ಮಹಾರಾಜನಿಗೆ ಹೊಸ ಮಂತ್ರಿಯನ್ನು ನೇಮಿಸಿಕೊಳ್ಳುವುದು ಇಷ್ಟವೇ ಇರಲಿಲ್ಲ. ಈ ಮಂತ್ರಿಯೇ ಇದ್ದರೆ ಒಳ್ಳೆಯದು, ಇಂತಹ ಧರ್ಮನಿಷ್ಠಾವಂತ ಬೇರೊಬ್ಬ ಸಿಗಲಾರ...ಎಂಬ ಯೋಚನೆ ಮನದಲ್ಲಿ. ಖಿನ್ನ ಮುಖ ದಿಂದ ನುಡಿದ,

"ಅಯ್ಯಾ, ಮಂತ್ರಿವರ್ಯನೆ ಹೊಸ ಮಂತ್ರಿಯನ್ನು ನೇಮಕ ಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಅಲ್ಲದೆ, ನಿನ್ನಂತಹ ಧರ್ಮನಿಷ್ಠರು ಸಿಗುತ್ತಾರೆಯೋ ಅದೇ ಅನು ಮಾನ..."

"ಏನೇ ಆದರೂ, ನೀನು ಇನ್ನೊಬ್ಬ ಮಂತ್ರಿಯನ್ನು ನೇಮಿಸಿಕೊಳ್ಳಲೇಬೇಕು. ನಾನಿರುವ ಸ್ಥಿತಿಯಲ್ಲಿ ನಾನು ನಿನ ಗೇನನ್ನೂ ಸಹಾಯ ಮಾಡಲಾರೆ. ಆದ್ದರಿಂದ, ಚಿಂತೆ ಮಾಡದೆ ಬೇರೊಬ್ಬನನ್ನು ಸಂಪಾದಿಸು. ಅದೇ ನಿನಗೆ ಸರಿ ಯಾದ ಮಾರ್ಗ."

ಸತ್ಯವ್ರತ ತನ್ನೊಳಗೇ ಯೋಚಿಸಿ ನುಡಿದ,

"ಸ್ವಾಮಿ, ಮಂತ್ರಿವರ್ಯರೇ, ನಾನು ಈಗಾಗಲೇ ನಿಮ್ಮ ಸ್ಥಾನಕ್ಕೆ ಅನ್ಯರನ್ನು ನೇಮಿಸಿಕೊಳ್ಳಲಾರೆ. ನಿಮ್ಮ ಆರೋಗ್ಯ ನಿಧಾನವಾಗಿ ಕೈಗೂಡಬಹುದು. ಸ್ವಲ್ಪಕಾಲ ಕಾದು ನೋಡುವುದು ಒಳ್ಳಿತು,"

"ಮಹಾರಾಜ, ಚಿಂತಿಸಬೇಡ. ನೀನು ಈಗಿನಿಂದಲೇ ಹುಡುಕಿಕೊಳ್ಳುವುದು ಒಳ್ಳೆಯದು. ಖಂಡಿತ ನಿಧಾನಿಸ ಬೇಡ."

ರಾಜ ಚಿಂತೆಗೊಳಗಾದ. ಮಂತ್ರಿಯನ್ನು ಆರಿಸುವುದೆಂದರೆ ಸಾಮಾನ್ಯವೇ. ಆತ ಬುದ್ಧಿವಂತನೂ ತಂತ್ರಜ್ಞಾನಿಯೂ ಆಗಿರಬೇಕು. ಹೇಗೆ ಆರಿಸಿಕೊಳ್ಳಲಿ ಎಂದು ತನ್ನಲ್ಲೇ ತರ್ಕಿಸಿದ.

ಕೊನೆಗೊಂದು ಉಪಾಯ ಹೊಳೆಯಿತು. ತನ್ನವೇಶವನ್ನು ಮರೆಸಿಕೊಂಡು ನಗರದ ಬೀದಿಗಳಲ್ಲಿ ತಿರುಗಾಡಲು ಹೊರಟ. ನಾಲ್ಕು ಜನ ಸೇರಿದ ಕಡೆಗಳಲ್ಲಿ, ಅಂಗಡಿ-ಹೋಟೆಲುಗಳಲ್ಲಿ ಜನರು ತಮ್ಮ ತಮ್ಮೊಳಗೆ ತರ್ಕಿಸುವ ವಿಷಯದ ಮೇಲೆ ಯಾರಿಗೂ ತಿಳಿಯದಂತೆ ಗಮನ ಹರಿಸಿದ.

ಕೆಲವರು ಮಹಾರಾಜನು ಬುದ್ಧಿವಂತನೆಂದರೆ, ಇನ್ನೂ ಕೆಲವರು ವೃದ್ಧಮಂತ್ರಿಯೇ ಬುದ್ಧಿವಂತನೆಂದು ವ್ಯಾಖ್ಯಾನಿಸುತ್ತಿದ್ದರು. ಈ ಶ್ರೇಷ್ಠಮಂತ್ರಿಯು ಇಲ್ಲವಾದ ಮೇಲೆ ರಾಜ್ಯದ ರಾಜ್ಯಭಾರ ಹೇಗಿರುತ್ತೋ ಎಂದೆಲ್ಲಾ ಅನುಮಾನ ಮತ್ತು ಕಳವಳ ವ್ಯಕ್ತ ಪಡಿಸುತ್ತಿದ್ದರು.

ರಾಜ ಮಂತ್ರಿಗಾಗಿ ಎಲ್ಲೆಲ್ಲಿ ಹುಡುಕಿದರೂ ಸರಿಯಾದ ಅಭ್ಯರ್ಥಿ ದೊರೆಯಲಿಲ್ಲ ಮಾತ್ರವಲ್ಲ, ಕಣ್ಣಿಗೂ ಯಾರೂ ಕಾಣಿಸಲಿಲ್ಲ. ರಾಜ ಸೋತು ಸೊಗಡಾಗಿ ಮುಖ್ಯಮಂತ್ರಿಯ ಮನೆಗೆ ಹೋಗಿ ಅವನ ಸಲಹೆಯನ್ನು ಕೇಳಿದ.

"ಸ್ವಾಮಿ, ರಾಜ್ಯಕ್ಕೆ ಶ್ರೇಷ್ಠ ಮಂತ್ರಿಯಾಗಲು ತಕ್ಕ ಬುದ್ಧಿವಂತರು ಅರಮನೆಯ ಸಭಾಂಗಣಕ್ಕೆ ಬರಬೇಕೆಂದು ಡಂಗೂರ ಹಾಕಿಸು. ಎಲ್ಲರೂ ಬಂದನಂತರ ಆರಿಸಬಹುದು."

ದೊರೆ ಆದಕ್ಕೆ ಒಪ್ಪಿ ದೂತನನ್ನು ಡಂಗೂರ ಹಾಕಲು ಕಳುಹಿಸಿದ.

"ರಾಜ್ಯಕ್ಕೆ ಶ್ರೇಷ್ಠಮಂತ್ರಿಗಳು ಬೇಕಾಗಿದೆ. ಬುದ್ಧಿವಂತರೆಲ್ಲ ಅರಮನೆಯ ಸಭಾಂಗಣಕ್ಕೆ ಸೋಮವಾರ ಬೆಳಗಿನ ಹೊತ್ತು ಬರಬೇಕು. ಢಂ.ಢಂ.ಢಂ.ಢಂ !"

ದೂತ ಎಲ್ಲಾ ಬೀದಿ ಬೀದಿಗಳಲ್ಲೂ ಡಂಗೂರ ಹಾಕಿ ಬಂದ. ಡಂಗೂರ ಎಲ್ಲರ ಎದೆಯಲ್ಲೂ ಮೊಳಗಿತು.

ಆಗ ಜನಗಳಲ್ಲಿ ಹುರುಪೇ ಹುರುಪು. ಸೋಮವಾರ ಬರುವುದನ್ನೇ ಕಾಯುತ್ತಿದ್ದರು. ಮುದುಕರು ಹುಡುಗರು ದಂಡುಗಟ್ಟಿ ಅರಮನೆಯ ಸಭಾಂಗಣಕ್ಕೆ ಬಂದರು. ಕಿಕ್ಕಿರಿ ತುಂಬಿತು ಸಭಾಂಗಣ.

ಯಾರನ್ನು ನೋಡಿದರೂ ಮುಖದಲ್ಲಿ ಕಳೆಯೂ ಇಲ್ಲ. ತಲೆಯಲ್ಲಿ ಬುದ್ಧಿಯೂ ಇಲ್ಲ. ಎಲ್ಲರೂ ಸರ್ವೇಸಾಮಾನ್ಯ ಜನ. ಮಹಾಮಂತ್ರಿ ಸ್ಥಾನಕ್ಕೆ ಸಾಮಾನ್ಯರು ಸಲ್ಲುವರೆ ?

ರಾಜನಿಗೆ ಚಿಂತೆ ಹತ್ತಿತು.

° ° ° °

ವೃದ್ಧ ಮಂತ್ರಿ ರಾಜನ ಮುಂದೆ ತನ್ನ ಸಲಹೆಯನ್ನು ಮುಂದಿಟ್ಟ,

"ಇವರಲ್ಲಿ ಕೆಲವರನ್ನು ಮಾತ್ರ ಬರಮಾಡಿಕೊಳ್ಳಿರಿ. ಮುಂದೆ, ಅವರಲ್ಲೂ ಸ್ಪರ್ಧೆ ಏರ್ಪಡಿಸಬೇಕು. ಅನಂತರ,

ಆಯ್ಕೆಯ ವಿಚಾರ. ಈಗಲೇ ಚಿಂತೆ ಹಚ್ಚಿಕೊಂಡು ತಲೆ ಕೆಡಿಸಿಕೊಳ್ಳುವುದು ಬೇಡ."

ಆ ಕೆಲವರನ್ನೂ ಆಯ್ದು ಬರ ಮಾಡಿಕೊಳ್ಳುವುದು ಕಷ್ಟವೇ ಎಂಬಂತಹ ಪರಿಸ್ಥಿತಿ. ರಾಜ ವಿಚಾರಶೀಲನಾದ.

"ಇಂದು ವಿದ್ಯೆ ಬುದ್ಧಿಗಳ ಮೇಲೆಯೇ ಬರ ಮಾಡಿ ಕೊಳ್ಳಿರಿ."

ಮಂತ್ರಿಯ ಸಲಹೆಯ ಪ್ರಕಾರ ಪಂಡಿತೋತ್ತಮ ರನ್ನು ಆರಿಸಿ ಒಂದು ವಾರದ ನಂತರ ಅರಮನೆಗೆ ಬರಲು ಹೇಳಿದ. ಅಷ್ಟೊಂದು ಮಂದಿಯಲ್ಲಿ ನಾಲ್ವರು ಮಾತ್ರ ಗಣನೆಗೆ ಬಂದರು.

ಆ ನಾಲ್ಕು ಮಂದಿಗೂ ಉತ್ಸಾಹವೇ ಉತ್ಸಾಹ. ಸಂತೋಷದಿಂದ ಉಬ್ಬಿಹೋದರು.

ಅವರಿಗೆಲ್ಲಾ "ಇಂಥ" ದಿವಸ ಅರಮನೆಗೆ ಬರಬೇ ಕೆಂದೂ ನಿರೂಪ ಬರೆಸಿದ ಮಹಾರಾಜ.

ಆ ದಿನ ಸರಿಯಾದ ಸಮಯಕ್ಕೆ ನಾಲ್ವರೂ ನಾ ಮುಂದು ತಾಮುಂದು ಎಂದು ಓಡಿಬಂದರು ಅರಮನೆಯ ಸಭಾಂಗಣಕೆ.

ವೃದ್ಧ ಮಂತ್ರಿಯೊಡನೆ ರಾಜ ಸಭಾಂಗಣದಲ್ಲಿ ಮಂಡಿ ಸಿದ್ದ. ಅವರಿಬ್ಬರ ಹೊರತು ಮತ್ತಾರೂ ಇರಲಿಲ್ಲ ಸಭೆ ಯಲ್ಲಿ. ರಾಜ ನಾಲ್ವರನ್ನೂ ನೋಡಿದ. ಮಧ್ಯಮ ವಯ ಸ್ಸಿನಲ್ಲಿದ್ದ ಮೂವರಲ್ಲಿ ದುರಾಸೆ-ದುಮ್ಮಾನಗಳು ಕಾಣಿಸುತಿ ದ್ದುವು. ಉಳಿದ ಒಬ್ಬನು ಮಾತ್ರ ಸಾತ್ವಿಕನಾಗಿ ಕಾಣಿಸಿದ.

ರಾಜ ಪ್ರಶ್ನೆ ಹಾಕಿದ,

"ಎಲೈ, ಬ್ರಾಹ್ಮಣೋತ್ತಮರೇ ಕೇಳಿ. ರಾಜ್ಯದಲ್ಲಿ ಯುದ್ಧದ ಪ್ರಸಂಗ ಒದಗಿ ಬಂದರೆ ಅದರ ನಿವಾರಣೋಪಾಯ ಹೇಗೆ ?"

ಮೊದಲನೆಯ ಅಭ್ಯರ್ಥಿ ಅಂದ "ಸ್ವಾಮೀ, ಶತ್ರುಗಳ ಸುಳಿವನ್ನು ನಾವು ಮೊದಲೇ ಅರಿತುಕೊಂಡು ಯುದ್ಧ ಸನ್ನದ್ಧರಾಗಿದ್ದರೆ ಶತ್ರುಗಳಿಂದ ಬಾಧಕವಿಲ್ಲ."

ಎರಡನೆಯ ಅಭ್ಯರ್ಥಿ ಅಂದ "ಮಹಾಸ್ವಾಮೀ, ನೀವು ಯುದ್ಧಗಳ ಪರ್ವಕಾಲದಲ್ಲಿ ಇದ್ದು ನೋಡಿದವರು. ಅಂದಮೇಲೆ, ನಿಮ್ಮ ಹರಿತವಾದ ಬುದ್ಧಿಗೆ ನಾವು ಹೇಳುವುದಾದರೂ ಏನು ?"

ಮೂರನೆಯ ಅಭ್ಯರ್ಥಿ ನುಡಿದ "ಸ್ವಾಮೀ, ನಾನು ಬರುವುದು ನಿಮ್ಮ ಕಿಂಕರನಾಗಿ. ನೀವು ಹೇಗೆ ಹೇಳುವಿರೋ ಹಾಗೆ ಮಾಡುವೆ."

ನಾಲ್ಕನೆಯವನು ಕರಗಳನ್ನು ಜೋಡಿಸಿಕೊಂಡು ಹೇಳಿದ "ಸ್ವಾಮೀ, ಶತ್ರುಗಳು ಒಳ ನುಗ್ಗದಂತೆ ಮೊದಲೇ ಕಂದಕವನ್ನು ತೋಡಿದರೆ ಶತ್ರುಗಳು ಇತ್ತ ಯಾವತ್ತೂ ಸುಳಿಯಲಾರರು."

o o o o

ರಾಜ ಮತ್ತು ವೃದ್ಧ ಮಂತ್ರಿಗಳಿಬ್ಬರೂ ನಾಲ್ವರ ಅಭಿಪ್ರಾಯವನ್ನು ಕುರಿತು ಯೋಚಿಸಿದರು.

ಮಂತ್ರಿ ಇಂತೆಂದ "ನಾಲ್ಕನೆಯವನ ಅಭಿಪ್ರಾಯ ಹೆಚ್ಚು ವಿಶ್ವಾಸ ಪೂರ್ಣವಾದುದು. ಸಧ್ಯ, ಅವನನ್ನೆ ನಿಯಮಿಸಿಕೊಳ್ಳಿ."

ದೊರೆ ತನ್ನಲ್ಲೇ ಯೋಚಿಸಿದ ಮಂತ್ರಿ ಅಂದುದರಲ್ಲಿ ಸತ್ವವಿದೆ ಅನ್ನಿಸಿತು. ಅವನನ್ನೇ ಮುಖ್ಯಮಂತ್ರಿಯಾಗಿ ನಿಯಮಿಸಿಕೊಂಡ. ರಾಜ್ಯಬಾರ ಸುಸೂತ್ರವಾಗಿ ನಡೆದು ರಾಜ ಸಂತುಷ್ಟನಾದ.

— o —

# ನಿಯಾಲಿಯಾಂಗ್

ಚೀನಾ ದೇಶದಲ್ಲಿ ಬಡತನ ಉಕ್ಕುತಿದ್ದ ಕಾಲ.

ಬಡತನವೆಂದರೆ ಅತೀ ಬಡತನ, ಬಟ್ಟೆಗಿದ್ದರೆ ಹೊಟ್ಟೆ ಗಿಲ್ಲ. ಹೊಟ್ಟೆಗಿದ್ದರೆ ಬಟ್ಟೆಗಿಲ್ಲ. ಪ್ರತಿಯೊಬ್ಬರೂ ಹೊಟ್ಟೆ ಬಟ್ಟೆಗಾಗಿ ದುಡಿಯಲೇಬೇಕಾಗಿತ್ತು. ಹುಡುಗ-ಹುಡುಗಿ ಯರೂ ದುಡಿಯುತಿದ್ದರು. ಮುದುಕ-ಮುದುಕಿಯರೂ ದುಡಿಯುತಿದ್ದರು. ತರುಣ-ತರುಣಿಯರಿಗಂತೂ ಬಿಡುವೇ ಇಲ್ಲದಷ್ಟು ದುಡಿತ. ಆದರೂ, ಸುಖ ಜೀವನ ನಡೆಸುವುದು ಕಷ್ಟವೇ.

ಲಿಯು ಝಾಂಕಿಯಾ ಎಂಬುದೊಂದು ಬೃಹದ್ ಕೆರೆ. ಅದು ಯಾವತ್ತೂ ಬತ್ತುತ್ತಿರಲಿಲ್ಲ. ಆ ವರ್ಷ ಅದೂ ಕೂಡ ಬತ್ತಿ ಹೋಗಿತ್ತು. ಕೆರೆಯ ಮಧ್ಯೆ ಸ್ವಲ್ಪ ಮಾತ್ರವೇ ನೀರಿತ್ತು. ಮದುಕ ಮದುಕಿಯರು ಕೆರೆಯ ದಂಡೆಯ ಮೇಲೆ ಕುಳಿತು, ನೀರು ತುಂಬಿಸಿ ಜೀವಕೋಟಿಯುನ್ನು ಸಂರ ಕ್ಷಿಸು ಎಂದು ಜಲದೇವತೆಯುನ್ನು ಬೇಡುತಿದ್ದರು ಕಣ್ಣೀರು ಕರೆದು. ಆದರೂ ಜಲದೇವತೆ ಒಲಿಯಲಿಲ್ಲ. ನೀರು ತುಂಬಲಿಲ್ಲ.

ಲುಕಿಯೋ ಲುಯು-ಆನ್ ಎಂಬುವನೊಬ್ಬ ಕೂಲಿಗಾರ. ಬರೀ ಕೂಲಿಯಿಂದಲೇ ಬದುಕು. ಅವನಿಗೆ ಒಕಾಡ-ಜಾಂಗ್ ಎಂಬ ಮಡದಿಯಿದ್ದಳು. ಮಗನ ಹೆಸರು ವಿಾಲಿಯಾಂಗ್. ಹುಡುಗ ತಂದೆ ತಾಯಿಯರೊಂದಿಗೆ ಕಂಡವರ ನೆಲದಲ್ಲಿ ದುಡಿಯುತಿದ್ದ. ಬರುವ ಕೂಲಿ ಅಲ್ಪವಾದುದರಿಂದ ಹುಡುಗ ದುಡಿಯಲೇಬೇಕಿತ್ತು. ಶಾಲೆಗೆ ಹೋಗಿ ಕಲಿಯಲು ಅವಕಾಶ ದೊರೆಯಲಿಲ್ಲ. ಶ್ರೀಮಂತ ಕುಟುಂಬದ ಮಕ್ಕಳು ಶಾಲೆಗೆ ಹೋಗಿ ಕಲಿಯುತಿದ್ದುದನ್ನು ನೋಡಿ ಹುಡುಗ ಕೊರಗುತಿದ್ದ. ಅಲ್ಲದೆ, ಅವನು ಹುಟ್ಟುಕಲಾವಿದ. ಕೆಲಸ ಮುಗಿಯುತ್ತಲೂ ಉಳಿದ ಅಲ್ಪ ಸಮಯದಲ್ಲಿ ಇದ್ದಲು ಮಸಿಯಿಂದ ಚಿತ್ರ ಬರೆಯುತಿದ್ದ. ಹೇಗೆ ಗೀಚಿದರೆ ಹಾಗೆ ಚಿತ್ರ ಸುಂದರವಾಗಿ ಮೂಡುತಿತ್ತು. ರಸ್ತೆಯ ಮೇಲೆ, ಗೋಡೆಗಳ ಮೇಲೆ, ಬಂಡೆಗಳ ಮೇಲೆ ಎಲ್ಲೆಂದರಲ್ಲಿ ಹೂವು, ಮೊಗ್ಗು, ಗಿಡ, ಮರ, ಮನೆ ಮಠಗಳ ಚಿತ್ರಗಳೇ. ಅತ್ತಿತ್ತ ತಿರುಗಾಡುವ ಜನರೆಲ್ಲ ಅಲ್ಲಿ ನಿಂತು ನೋಡಿ ಆನಂದಿಸುತಿದ್ದರು. ಆದರೇನು ? ಯಾರಿಗೂ ಹುಡುಗನ ಮೇಲೆ ಕರುಣೆ ಮೂಡಲಿಲ್ಲ.ಶಾಲೆಗೆ ಸೇರಿಸಲು ಯಾರೂ ಮುಂದಾಗಲಿಲ್ಲ. ಯಾರೂ ಕಾಸು ಬಿಚ್ಚಲಿಲ್ಲ ಕೂಡ. ಹುಡುಗನಿಗೆ ಉತ್ತೇಜನ ದೊರೆಯದಿದ್ದರೂ ಕಲಿತು ವಿದ್ಯಾವಂತನಾಗುವ ಮತ್ತು ಕಲಾವಿದನಾಗುವ ಆಸೆ ಅಳಿಯದೆ ದಿನದಿನವೂ ವೃದ್ಧಿಸುತಿತ್ತು. ಮನಸ್ಸೆಲ್ಲಾ ವಿದ್ಯೆಯ ಮೇಲೆ.

ಒಮ್ಮೆ ಆ ಊರಿನ ಜಾಂಗ್ ಯೆ ಕಲಾಶಾಲೆಗೆ ಹೋದ. ಹಿರಿಯ ಕಲಾವಿದರು ಚಿತ್ರಗಳನ್ನು ಬಿಡಿಸುತಿದ್ದರು. ಬಾಲಕ

ದೈನ್ಯದಿಂದ ತನ್ನ ಮನದಾಸೆಯನ್ನು ತೋಡಿಕೊಂಡ. ಗುರುಗಳು ಆ ವೇಳೆಗಾಗಲೇ ಅವನ ಚಿತ್ರಗಳನ್ನು ಕಂಡಿದ್ದರು. ಅವನಿಗೆ ಕಲಿಸಿದರೆ ತಮ್ಮನ್ನು ಮೀರಿಸುತ್ತಾನೆಂಬ ಅರಿವು ಅವರಿಗಿತ್ತು. ಅವನು ತೀರಾ ಬಡವ ಎಂಬುದು ತಿಳಿದಿದ್ದರೂ "ಮಾಲಿಯಾಂಗ್, ನೀನೆಷ್ಟು ಶುಲ್ಕ ಕೊಡುವೆ ?" ಎಂದು ಕೇಳಿದರು.

"ನನ್ನ ಬಳಿ ಏನೇನೂ ಹಣವಿಲ್ಲ ಧಣಿಗಳೇ"

"ಹಾಗೆಂದರೆ ಹೇಗೆ ? ಕಲಿಯುವುದೆಂದರೆ ಶಾಲೆಯ ಶುಲ್ಕ ಕೊಡದೆ ಆದೀತೆ ?"

ಹುಡುಗ ಮಾತಾಡಲಿಲ್ಲ, ಮುಖ ಮುದುಡಿ ಬಣ್ಣಗೆಟ್ಟಿತು.

"ಹಣವಿಲ್ಲದಿದ್ದರೆ ಹೋಗು, ನಿನಗಿಲ್ಲಿ ಅವಕಾಶವಿಲ್ಲ!" ಎಂದು ನಿಷ್ಠೂರವಾಗಿ ಹೇಳಿಬಿಟ್ಟರು.

ಹುಡುಗ ತುಂಬಾ ದುಃಖಿತನಾಗಿ ಮನೆಗೆ ಹಿಂದಿರುಗಿದ. ತಾಯಿ ಊಟಕ್ಕೆ ಕರೆದಳು "ಮಾಲಿಯಾಂಗ್, ಏಕೆ ಸಪ್ಪಗಿದ್ದಿ ? ಬಾ ಊಟ ಮಾಡು."

ಮಾಲಿಯಾಂಗ್ "ಹಸಿವಿಲ್ಲ" ಎಂದಷ್ಟು ಹೇಳಿ ಹಾಸಿಗೆ ಸೇರಿದ. ದುಃಖವುಕ್ಕಿ ಬಂತು. ಮುಖದ ಮೇಲೆ ಮುಸುಕು ಹಾಕಿಕೊಂಡು ಗಳಗಳನೆ ಅತ್ತುಬಿಟ್ಟ. ಮನದಲ್ಲೆಲ್ಲಾ ಅದೇ ವಿಚಾರ ತುಂಬಿ ಹೋಗಿತ್ತು. ಸ್ವಲ್ಪ ಹೊತ್ತಿನೊಳಗಾಗಿ ನಿದ್ದೆ ಆವರಿಸಿತು. ಮಧ್ಯರಾತ್ರಿ ಕಳೆದ ನಂತರ ಒಂದು ಕನಸು ಬಿತ್ತು. ಅದರಲ್ಲಿ ಬಿಳಿಯ ಬಣ್ಣದ ತೊಡಿಗೆಯಿಂದ

ಅಲಂಕೃತಳಾದ ದಂತದ ಬೊಂಬೆಯಂತಹ ದೇವಿಯೊಬ್ಬಳು ಆಕಾಶದಿಂದ ಇಳಿದು ಬಂದು ತಲೆಯ ದಿಶೆಯಲ್ಲಿ ಕುಳಿತು ಹಣೆಯ ಮೇಲೆ ಕೈಯಿಟ್ಟಳು.

ಅವಳ ಕಣ್ಣುಗಳು ಉಲ್ಕೆಗಳಂತೆ ಹೊಳೆಯುತಿದ್ದುವು.

"ಏಕೆ ದುಃಖಿಸುತಿದ್ದಿ ಮಗೂ ?" ಕೇಳಿದಳು ಅವಳು.

"ಅಮ್ಮಾ! ನಾನು ಚಿತ್ರಕಲೆಯನ್ನು ಚೆನ್ನಾಗಿ ಕಲಿಯಬೇಕು. ನನಗೆ ಯಾರೂ ಹೇಳಿಕೊಡುವವರಿಲ್ಲ."

"ಓ ! ಹಾಗೋ ? ಅದಕ್ಕೇಕೆ ಅಳುತ್ತಿ ? ನಾನು ನಿನಗೊಂದು ಮಾಯಾ ಕುಂಚವನ್ನು ಕೊಡುವೆ. ತೆಗೆದುಕೊ. ಅದರಿಂದ ನಿನ್ನಾಸೆ ಕೈಗೂಡುತ್ತೆ. ಆದರೆ, ಇದನ್ನು ಸ್ವಲ್ಪ ಬುದ್ಧಿವಂತಿಕೆಯಿಂದ ಉಪಯೋಗಿಸು."

"ಅಂದರೆ, ಹೇಗೆ ಉಪಯೋಗಿಸಬೇಕು ದಯವಿಟ್ಟು ಹೇಳಿ, ಅಮ್ಮಾ."

"ನೀನು ಯಾವುದರಲ್ಲಿ ವಾಸ್ತವತೆ ಉಳಿಸಿಕೊಳ್ಳಬೇಕೋ ಅದನ್ನು ಮಾತ್ರ ಪೂರ್ತಿಗೊಳಿಸು. ಉಳಿದವುಗಳು ಸ್ವಲ್ಪವಾದರೂ ಅಪೂರ್ಣವಾಗಿರಲಿ."

"ಅಮ್ಮಾ, ನೀವು ಯಾರೆಂದು ತಿಳಿಯಲಿಲ್ಲವಲ್ಲಾ ? ದಯವಿಟ್ಟು ತಿಳಿಸಿಕೊಡಿ. ನಿಮ್ಮನ್ನು ಏನೆಂದು ಕರೆಯಲಿ ?"

"ನಾನು ಸೂಂಗ್ ರಾಜವಂಶದ ರಾಣಿ. ನಿನ್ನ ಅಜ್ಜಿ-ಒಕಾಡ ಅರಮನೆಯಲ್ಲಿ ನನ್ನ ಪ್ರಿಯ ದಾಸಿಯಾಗಿದ್ದಳು. ನೀನೂ ಸಹ ನನಗೆ ಪ್ರಿಯನೇ. ಅದಕ್ಕೋಸ್ಕರ ನಾನು ನಿನ್ನ

ಕಷ್ಟಪರಿಹಾರಾರ್ಥವಾಗಿ ಬಂದಿರುವೆ. ಇದನ್ನು ತೆಗೆದುಕೊ. ಚಿಂತಿಸಬೇಡ."

"ಸರಿಯಾದ ವಿದ್ಯೆ-ಬುದ್ಧಿ ಕಲಿಯದ ನಾನು ಹೇಗೆ ಒಳ್ಳೊಳ್ಳೆಯ ಚಿತ್ರಗಳನ್ನು ನಿರ್ಮಿಸಲಿ ?"

"ಹಾಗಾದರೆ, ಇದೊಂದು ಲೇಖನಿ ಮತ್ತು ಪುಸ್ತಕವಿರುವ ಚೀಲ. ಇದನ್ನು ಇಟ್ಟುಕೊ. ಇವನ್ನು ಉಪಯೋಗಿಸಿದರೆ ವಿದ್ಯೆ ಬುದ್ಧಿ ಬೇಗನೆ ಹತ್ತುತ್ತೆ. ಅನಂತರ ಈ ಮಾಯಾ ಕುಂಚವನ್ನು ಉಪಯೋಗಿಸು. ಇದು ನೀನೇನನ್ನು ಬಯಸಿದರೆ ಅದನ್ನು ತೀರಾ ವಾಸ್ತವವಾಗಿ ಚಿತ್ರಿಸುತ್ತದೆ. ಮುಂದೆ ನೀನು ಕೀರ್ತಿಶಾಲಿಯಾಗಿ ಸುಖಜೀವನ ನಡೆಸುವೆ."

"ತಾಯಿ, ಬಹಳ ಉಪಕಾರವಾಯ್ತು."

ಹುಡುಗ ನಮಸ್ಕರಿಸಿದ.

ಸೂಂಗ್ ರಾಣಿ ಆಕಾಶ ಮಾರ್ಗವಾಗಿ ಹಾರುತ್ತ ಹೊರಟು ಹೋದಳು. ಮಿಾಲಿಯಾಂಗ್ ಮಾಯಾ ವಸ್ತುಗಳನ್ನು ತಿರುತಿರುಗಿಸಿ ನೋಡಿದ. ಎಲ್ಲವೂ ವಿಶೇಷವಾಗಿಯೇ ತೋರಿದುವು. ಚೀಲವನ್ನು ತಲೆದಿಂಬಿನ ಕೆಳಗೆ ಇಟ್ಟು ಮಲಗಿದ. ಆ ರಾತ್ರಿ ಅವನಿಗೆ ಸ್ವರ್ಗದಲ್ಲಿರುವಷ್ಟು ಸಂತಸದಾಯಕ ಮನಸ್ಸಿಗೆ.

ಮಿಾಲಿಯಾಂಗ್ ಬೆಳಿಗ್ಗೆ ಎಚ್ಚರವಾದಾಗ ರಾತ್ರಿಯ ಕನಸು ನೆನಪಾಯಿತು. ಎದ್ದು ತಲೆದಿಂಬು ಎತ್ತಿ ನೋಡಿದ. ದಿಂಬಿನ ಅಡಿಯಲ್ಲಿ ಪುಟ್ಟದೊಂದು ಚೀಲ. ಅದರಲ್ಲಿ ಪುಟ್ಟ ಪುಸ್ತಕ, ಪುಟ್ಟ ಲೇಖನಿ, ಪುಟ್ಟದೇ ಆದ ಮಾಯಾ ಕುಂಚ.

ಎಲ್ಲವನ್ನೂ ನೋಡಿದರೆ ಆನಂದವೋ ಆನಂದ! ಆ ತಾಯಿ ಹೇಳಿದ್ದು ಮೊದಲು ವಿದ್ಯೆ ಕಲಿತುಕೊ ಎಂದು.

ಹುಡುಗ ಹಾಸಿಗೆ ಸುತ್ತಿಟ್ಟು ಮುಖ ಮಜ್ಜನ ಮಾಡಿದ. ಒಂದು ಬಿಂದಿಗೆಯನ್ನು ತೆಗೆದುಕೊಂಡು ಲಿಯು ರ್ಝಾಂಕಿಯಾ ಕೆರೆಗೆ ಓಡಿದ. ಒಂದು ಬಿಂದಿಗೆ ನೀರು ತೋಡಿ ಕೊಂಡು ಸ್ನಾನ ಮಾಡಿದ ಮೇಲೆ ಮನೆಗೆ ಹಿಂದಿರುಗಿ ಬಂದು ಲೇಖನಿ ಪುಸ್ತಕ ಕೈಕೊಂಡರೆ ಓದು-ವಿದ್ಯೆ ಬಳಬಳನೆ ಬರು ತ್ತಿದೆ. ಬರೆದೇ ಬರೆದ. ಎಷ್ಟು ಬರೆದರೂ ಲೇಖನಿಯ ಮಸಿ ಆರದು. ಪುಸ್ತಕದ ಪುಟವೂ ತುಂಬದು. ಆಶ್ಚ ರ್ಯವೋ ಆಶ್ಚರ್ಯ! ಅಂದೇ ವಿದ್ಯೆ ಕರಗತವಾಯ್ತು. ಮಿಾಲಿಯಾಂಗ್ ಮಾಯಾ ಕುಂಚವನ್ನು ತೆಗೆದುಕೊಂಡ. ಸೂಂಗ್ ರಾಣಿ ಬುದ್ಧಿವಂತಿಕೆಯಿಂದ ಉಪಯೋಗಿಸು ಎಂದು ದನ್ನು ಮನದಲ್ಲಿಟ್ಟು ಯೋಚಿಸಿದ ಹೇಗೆ ಉಪಯೋಗಿಸ ಬೇಕು? ಏನು ಮಾಡಿದರೆ ಸರಿ ಎಂಬುದು ಯೋಚನೆಗಿಟ್ಟು ಕೊಂಡಿತು. ಬಾಲಕ ತೀವ್ರ ಆಲೋಚನಾಭರಿತನಾದ.

o o o o

ಮಿಾಲಿಯಾಂಗ್ ಮಾಯಾ ಕುಂಚವನ್ನು ಕಣ್ತುಂಬ ನೋಡಿದ. ಮಿರಮಿರನೆ ಮಿರುಗುತ್ತಿದೆ ಬಂಗಾರದ ಕುಂಚ! ಒಮ್ಮೆಯೂ ಬಳಸಿರದ ಹೊಚ್ಚ ಹೊಸ ಕುಂಚ! ಬಾಲಕನಿಗೆ ಆನಂದ ಸುಖ ಸಂತೋಷಗಳು ಒಮ್ಮೆಲೇ ಮೂಡಿದುವು. ಬಂಗಾರದ ಕುಂಚವೆಂದರೆ ಸಾಮಾನ್ಯವೇ? ಮನದಲ್ಲಿ ಅತ್ಯಾಶ್ಚರ್ಯ ಮೂಡಿತು. ಆ ಕೂಡಲೇ ಅವನಿಗೆ ನೆನಪಾ

ಯಿತು. ಅವಳು ಸೂಂಗ್‌ವಂಶದ ರಾಣಿ ಎಂದು, ರಾಣಿ ಕುಂಚವನ್ನು ನೀಡುವುದೆಂದರೆ ಬಂಗಾರದ್ದಲ್ಲದೆ ಮತ್ತೇನು ಕೊಟ್ಟಾಳು ?

ಪಕ್ಕದ ಮನೆಯ ಚಿಕ್ಕಮ್ಮನ ಮಗಳು ಶಾಂಗ್‌ಲೀ ಮನೆಯ ಒಳಗೆ ಹೊರಗೆ ಸುತ್ತಾಡಿ "ಬಲೂ ಚೆನ್ನಾಗಿದೆ ಈ ಕುಂಚ ! ನನಗೊಂದು ನಿಜವಾದ ಪುಟ್ಟ ಹಕ್ಕಿ ಬರೆದು ಕೊಡು ಅಣ್ಣಾ" ಎಂದಳು.

ಮಾಲಿಯಾಂಗ್ ಒಂದು ಮುದ್ದು ಮುದ್ದಾದ ಬುಲ್ ಬುಲ್ ಹಕ್ಕಿಯ ಚಿತ್ರವನ್ನು ಬರೆಯ ತೊಡಗಿದ. ನೀಲ ಗಣ್ಣಿನ ಹಕ್ಕಿ ಚಿತ್ರವನ್ನು ಪೂರೈಸುವ ಮುನ್ನ ಯೋಚಿಸಿದ... ಸೂಂಗ್‌ರಾಣಿ ಬಹಳ ಬುದ್ಧಿವಂತಿಕೆಯಿಂದ ಉಪಯೋಗಿಸು ಎಂದುದು ಕಿವಿಯಲ್ಲಿ ಮತ್ತೆಮತ್ತೆ ಮೊರೆಯಿತು.

ಬಳಿಯಲ್ಲಿ ಕುಳಿತು ನೋಡುತ್ತಲೇ ಇದ್ದ ಶಾಂಗ್‌ಲೀ ಆವಸರಿಸುತ್ತಲೇಇದ್ದಾಳೆ.

"ಅಣ್ಣಾ, ಬೇಗನೆ ಮುಗಿಸಿ ಕೊಡು, ನಾನು ಎಲ್ಲರಿಗೂ ತೋರಿಸಬೇಕು."

ಮಾಲಿಯಾಂಗ್ ಉತ್ಸಾಹದಿಂದ ಚಿತ್ರಿಸತೊಡಗಿದ, ಗಿಡದ ಮೇಲೆ ಹಕ್ಕಿಯೊಂದು ಕುಳಿತಿದೆ. ಕಪ್ಪು-ಬಿಳುಪಿನ ಹಕ್ಕಿಗೆ ನೀಲಿ ಕಣ್ಣುಗಳು. ಹಕ್ಕಿಯನ್ನು ಬರೆದು ಮುಗಿಸಿದ್ದಾನೆ. ಹಿಂದಿನ ಪುಚ್ಛ ಪುಕ್ಕ ಬರೆಯುವುದೊಂದು ಬಾಕಿ. ಪುಕ್ಕಕ್ಕೆ ಬಣ್ಣ ಬಳಿದು ಮುಗಿಸುತಿದ್ದಂತೆ ಹಕ್ಕಿ ಚೀಂ ಚೀಂ

ಪೀಂ ಎಂದಿತು. ಪುಟ್ಟ ಹುಡುಗಿ ಶಾಂಗ್‌ಲಿಯು ಆನಂದಕ್ಕೆ ಎಣೆಯೇ ಇಲ್ಲ. ತಕ್ಷಣ ಅದನ್ನು ಕೈಗೆತ್ತಿಕೊಂಡು ಮುದ್ದು ಮಾಡಿದಳು. ಸುತ್ತಮುತ್ತಿನ ಜನರೆಲ್ಲಾ ನಿಂತು ಬಗ್ಗಿ ಬಗ್ಗೀ ನೋಡಿದರು. ಎಂತಹ ಆಶ್ಚರ್ಯ ಎಂದು. ಹಕ್ಕಿ ಚೀಂ ಪೀಂ ಎನ್ನುತ್ತಲೇ ಇದೆ ಪುಟ್ಟ ಬಾಯಿ ತೆರೆದು.

ಸುದ್ದಿ ಊರೆಲ್ಲಾ ಹರಡಿತು. ಪುಟ್ಟ ಮಿಾಲಿಯಾಂಗನ ಅದ್ಭುತ ಚಿತ್ರ ಕಲೆಯ ಮಹತ್ ಸಿದ್ಧಿಯನ್ನು ಜನ ಬಣ್ಣಿಸಿ ಬಣ್ಣಿಸಿ ಮಾತಾಡಿದರು. ಜನಜನಿತವಾಯಿತು ಮಾಯಾ ಕುಂಚ.

o o o o

ಮಾಂತ್ರಿಕನೊಬ್ಬ ಆ ಕುಂಚವನ್ನು ಹೇಗಾದರೂ ಅಪಹರಿಸಬೇಕೆಂದು ತನ್ನೊಳಗೇ ಸಂಚು ಹೂಡಿದ. ಅವನ ಮನಸ್ಸು ಬುದ್ಧಿಗಳು ತೀರಾ ಕೆಟ್ಟು ಕಲ್ಮಶವಾಗಿದ್ದುವು.

"ಎಲೆ, ಮಿಾಲಿಯಾಂಗ್ ! ನಿನಗಿನ್ನೂ ಸರಿಯಾಗಿ ಚಿತ್ರಿಸಲು ಬರುತ್ತಿಲ್ಲ. ಕೊಡು ಇತ್ತ ನಾನು ಸರಿಯಾಗಿ ಚಿತ್ರಿಸಿ ತೋರಿಸುವೆ." ಎಂದ ಉಪಾಯವಾಗಿ.

"ಓ, ನೀನು ಹಾಗೆಲ್ಲಾ ಕೇಳಕೂಡದು. ಇದು ಇನ್ನೊಬ್ಬರಿಗೆ ಕೊಡುವಂತಹ ಕುಂಚವಲ್ಲ."

ಮಾಂತ್ರಿಕ ಎಷ್ಟೆಷ್ಟೋ ಪ್ರಯತ್ನಿಸಿದ ಹುಡುಗ ಕುಂಚವನ್ನು ಕೊಡಲೇ ಇಲ್ಲ. ಎಲ್ಲರೂ ನೋಡುತ್ತಿದ್ದಂತೆಯೇ ಒಂದು ಕೊಬ್ಬಿದ ಹಂದಿಯನ್ನು ಚಿತ್ರಿಸಿದ

ಮಿಾಲಿಯಾಂಗ್. ಕೋರೆದಾಡೆಗಳಿದ್ದ ಹಂದಿ ಆ ಮಾಂತ್ರಿಕನ ಕಾಲುಗಳ ಸಂದಿಯಲ್ಲಿ ನುಗ್ಗಿ ಅವನನ್ನು ಹೊತ್ತುಕೊಂಡು ಹೋಗಿ ದೂರದಲ್ಲಿ ಮೈ ಕೊಡವಿ ತಿವಿದು ಗಾಯಗೊಳಿಸಿತು. ಹೋ ! ಎಂದು ಕೂಗುತ್ತ ಅವನು ಎದ್ದು ಬಿದ್ದು ಓಡಿ ಹೋದ.

ಜನ 'ಹೋ !' ಎಂದು ಕೂಗಿದರು ಚಪ್ಪಾಳೆ ತಟ್ಟಿ.

ಹುಡುಗರು ಕೇಕೆ ಹಾಕಿ ಕುಣಿದಾಡಿ ನಕ್ಕರು. ಹುಡುಗಿಯರೂ ಕೂಡಿ ಬಿದ್ದೂ ಬಿದ್ದೂ ನಕ್ಕರು. ಎಲ್ಲೆಡೆಯೂ ನಗೆಯು ಗುಲ್ಲೆದ್ದಿತು.

ಮಾಂತ್ರಿಕ ಊರಿನ ದೊರೆ ಸೂಯಿ-ಚಾಂಗ್-ಗೆ ಸುದ್ದಿ ಮುಟ್ಟಿಸಿ "ಆ ಕುಂಚ ನಿನ್ನ ಬಳಿ ಇರಬೇಕಾದುದು ನ್ಯಾಯ. ಆ ಹುಡುಗನಿಗೆ ನಾಲ್ಕು ಒದೆ ಕೊಟ್ಟು ಕಿತ್ತುಕೊ" ಎಂದ.

ಸೂಯಿ-ಚಾಂಗ್ ದೊರೆಗೆ ಮೊದಮೊದಲು ನಂಬಿಗೆ ಮೂಡಲಿಲ್ಲ. ಆದರೂ ಅದಾವ ಬಗೆಯ ಕುಂಚ ನೋಡಿಯೇ ತೀರಬೇಕೆಂದೆನಿಸಿತು. ಮಿಾಲಿಯಾಂಗನನ್ನು ಕೂಡಲೇ ತನ್ನ ಅರಮನೆಗೆ ಕರೆತರಲು ತನ್ನ ಮಂತ್ರಿಯನ್ನೇ ಕಳುಹಿಸಿದ. ಮಂತ್ರಿ ಕುದುರೆ ಹತ್ತಿ ದೌಡಾಯಿಸುತ್ತ ಮಿಾಲಿಯಾಂಗ್ ಮನೆಗೆ ಆಗಮಿಸಿದ. ಕುದುರೆಯಿಂದ ದೊಪ್ಪನೆ ಇಳಿದು ಅಂಗಳದಲ್ಲಿ ನಿಂತು ಜೋರಾಗಿ ಕರೆದ,

"ಮಿಾಲಿಯಾಂಗ್, ಮಿಾಲಿಯಾಂಗ್ ! ಬಾರಯ್ಯ ಇಲ್ಲಿ."

ವ್ಹಾಲಿಯಾಂಗ್ ಮಂತ್ರಿಯ ಧ್ವನಿಯನ್ನು ಕೇಳಿ ಹೊರ ಬಂದ. ಕುದುರೆಯನ್ನೂ ಮಂತ್ರಿಯ ಲಕಲಕ ಹೊಳೆಯುವ ಉಡುಪನ್ನೂ ನೋಡಿದಾಗಲೇ ಭಯವುಂಟಾಯಿತು ಮನಸ್ಸಿಗೆ.

"ಏನು ಧಣಿಗಳೇ ?" ಹುಡುಗ ಕೇಳಿದ.

ಮಂತ್ರಿ ಹುಡುಗನನ್ನು ನೋಡಿದ. ಈ ಸಣ್ಣವ ಏನು ಚಿತ್ರ ಬರೆದಾನು ಎನಿಸಿತು ಮನಸ್ಸಿಗೆ. ಆದರೂ ಅಂದ,

"ನೀನು ಸೂಯಿ-ಚಾಂಗ್ ದೊರೆಯ ಚಿತ್ರ ಬರೆಯಲು ಅರಮನೆಗೆ ಬರಬೇಕೆಂದು ಅಪ್ಪಣೆಯಾಗಿದೆ."

ಮ್ಹಾಲಿಯಾಂಗ್ ತನ್ನಲ್ಲೇ ಯೋಚಿಸಿದ. ಅರಮನೆಗೆ ಹೋದರೆ ನನ್ನ ಕುಂಚವನ್ನು ಕಸಿಯದೆ ಬಿಟ್ಟಾರೆಯೆ ? ಎಂಬ ಯೋಚನೆ ಮನದಲ್ಲಿ ತಟ್ಟನೆ ಸುಳಿಯಿತು. ನಾನು ಬರಲಾರೆ ಎನ್ನಲು ಪ್ರಯತ್ನಿಸಿದರೆ ಮಾತುಗಳೇ ಹೊರಡವು ಬಾಯಿಯಿಂದ. ಎಲ್ಲರನ್ನೂ ಮಿಕಿಮಿಕಿ ನೋಡಿದ. ಮಂತ್ರಿ ಅವಸರಿಸಿದ "ಹೊರಡು ಹೊರಡು."

ಅಕ್ಕ ಪಕ್ಕದವರೆಲ್ಲಾ ಗದರುವಂತೆ ಜೋರಾಗಿ ಅಂದರು "ಹೋಗು, ಹೋಗು ! ದೊರೆ ಕರೆದರೆ ಹೋಗದಿರುವುದೇ ಈಗಲೇ ಹೋಗು ! ಹೋಗದಿದ್ದರೆ ಶೀಳಿಬಿಟ್ಟಾನು !

ಹುಡುಗ ಅರಮನೆಯ ಹಾದಿ ಹಿಡಿದ.

o o o

ಮಿಾಲಿಯಾಂಗ್ ಸೂಂಗ್ ರಾಣಿಯನ್ನು ಮನದಲ್ಲೇ ನೆನೆದ.

ಹಾದಿ ಸಾಗಿತು. ಮಂತ್ರಿ ಕುದುರೆಯಮೇಲೆ ಹೋಗುತ್ತಿದ್ದರೂ ಹುಡುಗನಿಗಾಗಿ ಬಲೂ ನಿಧಾನವಾಗಿ ಕುದುರೆಯನ್ನು ನಡೆಸುತಿದ್ದ. ಮಿಾಲಿಯಾಂಗ್ ಕುದುರೆಯ ಬಳಿಯಲ್ಲಿ ದಾಪುಗಾಲು ಹಾಕಿದ. ಇಬ್ಬರೂ ಅರಮನೆಯನ್ನು ಸ್ವಲ್ಪ ಸಮಯದಲ್ಲಿಯೇ ಸೇರಿದರು.

ಸೂಯಿ ಚಾಂಗ್ ರಾಜ ಸಿಂಹಾಸನದ ಮೇಲೆ ಕುಳಿತಿದ್ದ. ಮಗ್ಗುಲಲ್ಲಿ ರಾಣಿಯೂ ಕುಳಿತಿದ್ದಾಳೆ. ಎಲ್ಲರ ಮುಖದಲ್ಲೂ ಆಶ್ಚರ್ಯ ಕುತೂಹಲಗಳು ದಟ್ಟವಾಗಿ ಕಾಣಿಸುತ್ತಿವೆ. ಸಭೆಯು ತುಂಬ ಜನರು ತುಂಬಿ ಹೋಗಿದ್ದಾರೆ. ಎಲ್ಲರ ಕಣ್ಣುಗಳೂ ಮಿಾಲಿಯಾಂಗನ ಮೇಲೆ ನೆಟ್ಟಿದ್ದುವು.

“ಮಿಾಲಿಯಾಂಗ್, ಕೇಳು ! ರಾಜ್ಯದಲ್ಲಿ ಮಳೆಯಿಲ್ಲದೆ ಪೈರು ಒಣಗುತ್ತಿದೆ. ನಮಗೆ ಮಳೆಯು ಅಗತ್ಯ ಬಹಳವಿದೆ. ನೀನು ಮಳೆಯ ಚಿತ್ರ ಬರೆದು ಮಳೆ ಬರಿಸು ನೋಡೋಣ. ಆಯಿತೇ ?” ಎಂದ ದೊರೆ.

ಬಾಲಕ ಮನದಲ್ಲಿ ಸೂಂಗ್ ರಾಣಿಯನ್ನು ನೆನೆದು ಮಳೆ ಮೋಡವನ್ನು ರಚಿಸಿದ ಗೋಡೆಯಮೇಲೆ. ಅನಂತರ ದೊಡ್ಡದಾಗಿ ಬೀಳುವ ಮಳೆಯ ಹನಿಗಳ ಚಿತ್ರವಿರಚಿಸಿದ. ದಟ್ಟೈಣಿಸಿದ ಮಳೆಯ ಹನಿಗಳನ್ನು ಬರೆದು ಪೂರೈಸಿದನೋ ಇಲ್ಲವೋ ಮಳೆ ಧಾರಾಕಾರವಾಗಿ ಸುರಿಯಲಾರಂಭಿಸಿತು.

ಧೋ ಧೋ ಸುರಿಯುವ ಮಳೆಯನ್ನು ಆಶ್ಚರ್ಯದಿಂದ ನೋಡಿದರು ಎಲ್ಲಾ. ರಾಜ ಸಂತುಷ್ಟನಾಗಿ ಅಂದ,

"ಆ ಕುಂಚವನ್ನು ಕೊಟ್ಟು ಹೋಗು. ಅದು ಅರ ಮನೆಯಲ್ಲಿರಬೇಕಾದುದು ನ್ಯಾಯವೇ!"

ಮಂತ್ರಿಯೂ ಹಾಗೇ ಅಂದ. ಅಲ್ಲಿದ್ದ ಜನರೂ ಒಗ್ಗೂಡಿ ನುಡಿದರು "ಕುಂಚ ರಾಜನಿಗೇ ಸಲ್ಲತಕ್ಕದ್ದು ಕೊಟ್ಟು ಹೋಗು!"

ಹುಡುಗನಿಗೆ ಕಷ್ಟಕ್ಕೆ ಬಂತು. ಬಲೂ ತಬ್ಬಿಬ್ಬಾದ. ದುಃಖ ಉಕ್ಕಿ ಬಂತು. ಕುಂಚವನ್ನು ಅರಸನಿಗೆ ಕೊಟ್ಟು ಆಳುತ್ತಲೇ ಹಿಂದಿರುಗಿ ಬಂದ. ತಾಯಿ ಅಳುತ್ತ ಬಂದ ಮಗನನ್ನು ನೋಡಿ ಕರುಣೆ-ಕಳವಳಗಳಿಂದ ಬರಮಾಡಿ ಕೊಂಡು ಕೇಳಿದಳು "ಏನಾಯ್ತು, ಮಗೂ?"

ಹುಡುಗ ನಡೆದುದನ್ನು ವಿವರಿಸಿ ಉಪವಾಸ ಮಲಗಿ ಬಿಟ್ಟ. ಕಣ್ಣೀರಿನಿಂದ ದಿಂಬು ತೊಯ್ದು ಹೋಯಿತು. ರಾತ್ರಿ ಕನಸಿನಲ್ಲಿ ಪುನಃ ಅದೇ ರಾಣಿ ಸ್ವಚ್ಛ ಬಿಳಿಯುಡಿಗೆ ಯಲ್ಲಿ ಕಾಣಿಸಿಕೊಂಡಳು. ಬಾಲಕನ ತಲೆಯನ್ನು ಪ್ರೀತಿ ಯಿಂದ ನೇವರಿಸಿ ನುಡಿದಳು "ಮಗುವೇ, ಹೆದರಬೇಡ. ಬುದ್ಧಿವಂತಿಕೆಯಿಂದ ವರ್ತಿಸು."

ಮಳೆ. ಮಳೆ. ಮಳೆ. ಮಳೆ.

ಎಂದೆಂದಿಗೂ ನಿಲ್ಲದ ಮಳೆ ಎಡೆ ಬಿಡದೆ ಸುರಿಯಿತು. ಊರು ಕೇರಿಗಳು ತೊಳೆದು ಹೋದುವು. ಲಿಯು-

ಝಳಾಂಕಿಯಾ ಕೆರೆ ತುಂಬಿ ಕೋಡಿ ಹರಿಯಿತು. ದೊರೆ ಗೋಳಾಡಿದ. ಮಳೆಯನ್ನು ನಿಲ್ಲಿಸುವ ಪರಿ ಯಾರಿಗೂ ಹೊಳೆಯಲಿಲ್ಲ. ಕೂಡಲೇ ಮಂತ್ರಿಯನ್ನು ಪುನಃ ಬಾಲಕನ ಕಡೆಗೆ ಕಳುಹಿಸಿದ.

ಮಂತ್ರಿ ಸಿಟ್ಟಿನಿಂದ ಹುಡುಗನನ್ನು ಎಳೆದುಕೊಂಡೇ ಹೋದ. ಮಾಲಿಯಾಂಗ್ ಈ ಸಲಿ ಏನು ಮಾಡುತ್ತಾರೋ ಎಂಬ ಭಯದಿಂದ ತತ್ತರಿಸಿದ. ಮೈ ಗಡಗಡ ನಡುಗಿತು. ಅರಮನೆ ಮುಟ್ಟಿದಾಗ ಸೂಯಿ ಲಿನ್ ಭಯದಿಂದ ಕಂಗೆಟ್ಟಿದ್ದ. ಮುಖ ಕಪ್ಪು ತಳೆದಿತ್ತು. ಹುಡುಗನನ್ನು ಕಾಣುತ್ತಲೂ ಗಟ್ಟಿಯಾಗಿ ಅರಚಿದ.

"ಏಯ್, ಹುಡುಗ ! ಎಂತಹ ಕೆಟ್ಟ ಕೆಲಸ ಮಾಡಿದೆ? ದೇಶ ಮುಳುಗಿ ಹೋಗುತ್ತಿದೆ! ಈಗಲೆ ಮಳೆಯನ್ನು ನಿಲ್ಲಿಸು !"

ಮಾಲಿಯಾಂಗ್ ಮೈ ಮುದುಡಿ ನಿಂತ.

"ಈಗಲೇ ನಿಲ್ಲಿಸು."

"ಆ ಕುಂಚ ಕೊಡಿ ಸ್ವಾಮಿ !"

ದೊರೆ ಕುಂಚವನ್ನು ಕೊಟ್ಟ. ಮಾಲಿಯಾಂಗ್ ತನ್ನಲ್ಲೆ ಯೋಚಿಸಿದ. ಸೂಂಗ್ ರಾಣಿ ಮನದಲ್ಲಿ ಸುಳಿದಳಿದಳು. ಸುಡು ಹಗಲಿನ ರಣರಣಿಸುವ ಚಿತ್ರವನ್ನು ಚಿತ್ರಿಸಿದ. ಸೂರ್ಯಕಿರಣಗಳ ಪ್ರಖರ ಧಾರೆ ಹರಿದು ಬರುತ್ತಲೂ ಮಳೆ ನಿಂತು ಹೋಯಿತು !

ಆ ಕೂಡಲೇ ಸೂಯಿಲಿನ್ ದೊರೆ "ಆ ಕುಂಚವನ್ನು ಕೊಡು" ಎಂದ.

"ಒಂದು ಗಳಿಗೆ ತಾಳಿ ಸ್ವಾಮಿ! ಒಂದೇ ಒಂದು ಚಿತ್ರವನ್ನು ಬರೆದು ಕೊಡುವೆ."

ಮಾಲಿಯಾಂಗ್ ರೆಕ್ಕೆಗಳುಳ್ಳ ರಥದ ಚಿತ್ರವನ್ನು ರಚಿಸಿದ. ತಂದೆ ತಾಯಿಯೊಂದಿಗೆ ತಾನೂ ಅದರಲ್ಲಿ ಕುಳಿತಿರುವಂತೆ ಚಿತ್ರಿಸಿದ ನಂತರ ಅದರ ಚಕ್ರಗಳನ್ನೂ ಸಾರಥಿಯನ್ನೂ ಬರೆದು ಮುಗಿಸಿದ. ಆ ಕೂಡಲೇ ಆ ರಥ ಪುರ್ರನೆ ಆಕಾಶ ಮಾರ್ಗವಾಗಿ ಹಾರಿ ಹೋಯಿತು.

ಮಾಲಿಯಾಂಗ್ ದೂರ ದೇಶದಲ್ಲಿಳಿದು ತಾಯಿ ತಂದೆಯೊಡನೆ ಸುಖವಾಗಿದ್ದ.

ಅನಂತರ ಅವನು ಯಾವೊಂದು ಚಿತ್ರವನ್ನೂ ಪೂರ್ತಿಗೊಳಿಸದೆ ಅಲ್ಪಸ್ವಲ್ಪ ಉಳಿಸಿಕೊಂಡರೆ ಅವು ಜೀವ ತಳೆಯುವುದಿಲ್ಲ ಎಂಬುದನ್ನು ಅರಿತುಕೊಂಡ. ತನಗೆ ಅಗತ್ಯ ಬಿದ್ದಾಗ ಮಾತ್ರ ಚಿತ್ರವನ್ನು ಪೂರ್ತಿಗೊಳಿಸಿ ತನ್ನ ಅಗತ್ಯವನ್ನು ಪೂರೈಸಿಕೊಳ್ಳುತಿದ್ದ. ಅನಂತರ ಅವನಿಗೆ ಯಾವ ಕೊರತೆಯೂ ಬರಲಿಲ್ಲ. ಅವನು ಸೂಂಗ್ ರಾಣಿಯನ್ನು ಯಾವತ್ತೂ ಮರೆಯದೆ ಧ್ಯಾನಿಸುತಿದ್ದ.

— ೦ —

# ಶ್ರಮದಾನ

ಒಂದಾನೊಂದು ಕಾಲದಲ್ಲಿ ಸೋಮಲಾಪುರ ಎಂಬ ಊರೊಂದಿತ್ತು.

ಅಲ್ಲೊಬ್ಬ ಪಾಳೆಯಗಾರನಿದ್ದ. ಅವನದು ಬಹಳ ಅಚ್ಚುಕಟ್ಟಾದ ಪಾಳೆಯಗಾರಿಕೆ.

ಪ್ರಜೆಗಳು ಅವನಲ್ಲಿ ಪ್ರೀತಿ ವಿಶ್ವಾಸವಿಟ್ಟಿದ್ದರು. ಅವನ ಹೆಸರು ಯಶೋವರ್ಮ. ಅವನಿಗೆ ಮೂರು ಮಂದಿ ಹೆಣ್ಣು ಮಕ್ಕಳು. ರಾಜ್ಯಾಡಳಿತಕ್ಕೆ ತಕ್ಕ ಮಗನಿರದಿದ್ದುದೊಂದು ಕೊರತೆ. ಅವನು ತುಂಬಾ ದೈವಭಕ್ತ. ಪುತ್ರ ಸಂತಾನಕ್ಕಾಗಿ ಸದಾ ದೇವರಲ್ಲಿ ಬೇಡುತಿದ್ದ. ದೇಗುಲಗಳಲ್ಲಿ ಸದಾ ನಂದಾದೀಪ ಇಡಿಸುತಿದ್ದ. ದೀಪ ಕುಡಿಕಟ್ಟದಂತೆ ನಿತ್ಯ ಉರಿಯುತಿತ್ತು. ದೇವ ಬ್ರಾಹ್ಮಣರಿಗೆ ದಕ್ಷಿಣೆಯನ್ನೂ ಬಡ ಬಗ್ಗರಿಗೆ ಅನ್ನದಾನ, ವಸ್ತ್ರದಾನಗಳನ್ನೂ ನಡೆಸುತಿದ್ದ.

ಅಂತೂ ಎಲ್ಲಾ ಸತ್ಕಾರ್ಯಗಳಿಂದ ಜನಪ್ರಿಯತೆಯ ಸಂಪಾದನೆ ಆಯಿತು.

ಇಷ್ಟ ದೇವತೆಯು ಪ್ರಸನ್ನಳಾಗಿ ಅವನಿಗೆ ಪುತ್ರ ಸಂತಾನವನ್ನು ನೀಡಿದಳು. ಆಗ ಪಾಳೆಯಗಾರನಿಗೆ ಉಂಟಾದ

ಸಂತೋಷಕ್ಕೆ ಪಾರವೇ ಇಲ್ಲ. ಮಗುವಿನ ನಾಮಕರಣದ ಅಂಗವಾಗಿ ಪುರದೊಳಗೆ ಸಕ್ಕರೆಯನ್ನು ಹಂಚಿದ.

ಬಂಧು ಮಿತ್ರರಿಗೆ ಭಾರೀ ಔತಣವನ್ನೇರ್ಪಡಿಸಿದ. ಪುರದಲ್ಲಿ ಸುಖ ಸಂತೋಷಗಳು ನಲಿದಾಡಿದುವು. ಜನ ಕುಣಿದಾಡಿದರು. ಮಂಗಳವಾದ್ಯಗಳು ಮೊಳಗಿದುವು. ದೇವ ಸ್ಥಾನಗಳಲ್ಲಿ ಉತ್ಸವಗಳು ನೆರವೇರಿದುವು. ಪಾಳೆಯಗಾರ ಮಗನಿಗೆ ಸತ್ಯಪಾಲನೆಂದು ನಾಮಕರಣ ಮಾಡಿದ.

ನಾಮಕರಣದಲ್ಲಿ ಭಾಗವಹಿಸಿದ ಬ್ರಾಹ್ಮಣರಿಗೆ ದಕ್ಷಿಣೆ ಯೊಡನೆ ಗೋದಾನ ಮಾಡಿದ. ಹಿರಿಯ ಬ್ರಾಹ್ಮಣರು ಸಂತುಷ್ಟರಾದರು. ಅವರಲ್ಲಿ ಒಬ್ಬ ತರುಣ ಮುಂದೆ ಬಂದು ಪಾಳೆಯಗಾರನಿಗೆಂದ,

"ಎಲೈ, ಪಾಳೆಯಗಾರನೇ! ನಿನ್ನ ಶ್ರೇಷ್ಠದಾನಕ್ಕೆ ಮೆಚ್ಚಿದೆ. ಆದರೆ, ಒಂದು ಸಮಸ್ಯೆ ಇದೆ ನನ್ನ ಮನದಲ್ಲಿ. ಈ ನಿನ್ನ ಸಂಪತ್ತು ನಿನ್ನ ಸ್ವಂತ ದುಡಿಮೆಯಲ್ಲ. ನಾನಿದನ್ನು ಸ್ವೀಕರಿಸಲಾರೆ. ನಿನ್ನ ವೈಯಕ್ತಿಕ ದುಡಿಮೆಯಿಂದ ಬಂದದು ಏನಾದರೂ ಇದ್ದರೆ ಕೊಡು ತೆಗೆದುಕೊಳ್ಳುವೆ."

ಆ ಮಾತಿಗೆ ಒಂದು ಗಳಿಗೆ ತಬ್ಬಿಬ್ಬಾದ ಪಾಳೆಯಗಾರ. ಸ್ವಲ್ಪಹೊತ್ತು ತನ್ನಲ್ಲೇ ಯೋಚಿಸಿದ...ಅರಮನೆಯ ಸಂಪ ತ್ತೆಲ್ಲ ಪ್ರಜೆಗಳು ವರ್ಷೇ ವರ್ಷೇ ಕೊಡುತ್ತಿರುವ ಕಂದಾಯ ದಿಂದ ಬಂದುದೇನೋ ನಿಜ. ನನ್ನ ಸ್ವಂತ ಉತ್ಪನ್ನ ಏನೇನೂ ಇಲ್ಲ. ಈಗ ಏನು ಮಾಡಲಿ? ಬ್ರಾಹ್ಮಣನನ್ನು ಬರೀಗೈ ಯಲ್ಲಿ ಕಳುಹಿಸುವುದು ಹೇಗೆ? ಎಂಬ ಪ್ರಶ್ನೆಯೆದ್ದಿತು.

ಯೋಚನೆಯಲ್ಲಿ ಸ್ವಲ್ಪಹೊತ್ತು ಸುಮ್ಮನಾದ...ತನ್ನ ಸ್ವಂತ ದುಡಿಮೆ ಏನಿದ್ದೀತು ? ತನ್ನ ಈವರೆಗಿನ ಆಡಳಿತಕ್ಕೆ ನಾನು ಯಾವ ಪಗಾರವನ್ನು ತೆಗೆದುಕೊಳ್ಳಲಿಲ್ಲ. ಅದರ ಮೊತ್ತ ವೆಂದೇ ಏಕೆ ಹೇಳಬಾರದು... ? ಎನ್ನಿಸಿತು. ಪಾಳೆಯ ಗಾರ ಉತ್ಸುಕನಾದ,

"ಅಯ್ಯಾ, ಬ್ರಾಹ್ಮಣ ಶ್ರೇಷ್ಠನೇ, ಈವರೆಗೆ ನನ್ನ ಆಡ ಳಿತಕ್ಕಾಗಿ ನಾನು ಪಗಾರವನ್ನು ತೆಗೆದುಕೊಂಡಿಲ್ಲ. ಅಂದ ಮೇಲೆ, ಇದನ್ನು ಸ್ವಂತ ದುಡಿಮೆಯೆಂದೇ ಹೇಳಿದರೆ ತಪ್ಪಾ ಗಲಾರದು. ಇಷ್ಟು ದಿನಗಳ ಆಡಳಿತದಲ್ಲಿ ನನಗೊಂದು ಗೋವನ್ನು ದಾನ ಮಾಡಲು ಹಕ್ಕಿಲ್ಲವೇ. ನೀನೇ ಯೋಚಿಸಿ ನೋಡು."

ಆ ಮಾತಿಗೆ ಬ್ರಾಹ್ಮಣ ಒಪ್ಪಿ ನುಡಿದ,

"ಅಯ್ಯಾ, ಪಾಳೆಯಗಾರನೇ, ನಿನ್ನ ವಿಮರ್ಶಾ ಬುದ್ಧಿಗೆ ಮೆಚ್ಚಿದೆ. ದೇವರು ನಿನ್ನನ್ನು ಆಶೀರ್ವದಿಸಲಿ."

"ಅಂದಿಂದಿನ ನನ್ನ ಕಾರ್ಯಕಲಾಪಗಳಿಂದ ಎಷ್ಟು ಹಣ ಕೂಡಿರಬಹುದು ಎಂಬುದನ್ನು ನೀವೇ ಊಹಿಸಿ ಕೊಳ್ಳಿ."

"ಸರಿ, ನಾನು ಸಂತುಷ್ಟನಾದೆ. ನಿನ್ನ ಮಾತಿನಲ್ಲಿ ಸತ್ಯಾಂಶವಿದೆ. ನೀನಿದನ್ನು ಹೇಳಿ-ಕೇಳುವುದೂ ನ್ಯಾಯವೇ. ನೀನು ಧನ್ಯಾತ್ಮ. ದೇವರು ನಿನಗೆ ಮಂಗಳವನ್ನುಂಟು ಮಾಡಲಿ. ಇದು ನಿನ್ನ ಶ್ರಮದಾನವೇ ಹೊರತು ಬೇರೆ

ಯಲ್ಲ. ನಿನ್ನ ದಾನವನ್ನು ನಾನು ಸಂತೋಷದಿಂದ ಸ್ವೀಕರಿಸುತ್ತೇನೆ."

ಆಗ ಯಶೋವರ್ಮನು ಅವನಿಗೆ ದಕ್ಷಿಣೆಯೊಡನೆ ಗೋದಾನವನ್ನಿತ್ತು ಸತ್ಕರಿಸಿದನು.

ಅಲ್ಲಿ ನೆರೆದ ಎಲ್ಲಾ ಬ್ರಾಹ್ಮಣರು ಪಂಡಿತರು ಸಂತೋಷದಿಂದ ಪಾಳೆಯಗಾರನಿಗೆ ಹರಸಿ ಆಶೀರ್ವದಿಸಿ ದಾನ ದಕ್ಷಿಣೆಗಳ ಸಹಿತ ಹೊರಟು ಹೋದರು.

ಪಾಳೆಯಗಾರನು ಧರ್ಮದಿಂದ ಬಹುಕಾಲ ರಾಜ್ಯಭಾರ ಮಾಡಿದ. ರಾಜ್ಯದಲ್ಲಿ ಎಲ್ಲಾ ಕಡೆಗಳಲ್ಲೂ ಶಾಲೆಗಳನ್ನು ತೆರೆದು ಪ್ರಜೆಗಳನ್ನು ವಿದ್ಯಾವಂತರನ್ನಾಗಿ ಮಾಡಲು ವಿದ್ಯೆಯನ್ನು ಕಲಿಯಲೇ ಬೇಕೆಂದು ಕಡ್ಡಾಯಗೊಳಿಸಿದ. ಮನೆಮನೆಯ ಮಕ್ಕಳೂ ಶಾಲೆಯನ್ನು ಸೇರಿ ವಿದ್ಯಾವಂತರಾದರು. ರಾಜ್ಯ ಸಂಪತ್ ಸಮೃದ್ಧಿ ಹೊಂದಿ ಸಂತೋಷ ಸುಖ ಶಾಂತಿಗಳು ತುಂಬಿ ತುಳುಕಿದುವು. ಯಶೋವರ್ಮ ತನ್ನ ಕಾಲವನ್ನು ಸುಖದಿಂದ ಕಳೆದು ಮುಂದೆ ಮಗನಿಗೆ ರಾಜ್ಯವನ್ನು ವಹಿಸಿಕೊಟ್ಟು ತಾನು ವರ್ಣಾಶ್ರಮ ಧರ್ಮವನ್ನು ಸ್ವೀಕರಿಸಿ ಸನ್ಯಾಸಿಯಾದ.

— ೦ —

# ಅಸ್ಪೃಶ್ಯ

ಮಳೆ. ಮಳೆ. ಮಳೆ. ಮಳೆ.

ಧೋ ಧೋ ಸುರಿಯುವ ಜಡಿ ಮಳೆ.

ಮಧ್ಯಾಹ್ನ ಶುರುವಾದ ಮಳೆಗೆ ನಿಲುಗಡೆಯೇ ಇಲ್ಲ. ಮನೆಯ ಕದ ಮುಚ್ಚಿ ಕಿಟಿಕಿಯಲ್ಲಿ ಮಳೆಯ ಭೋರಾಟವನ್ನು ನೋಡುತಿದ್ದಳು ಲೈಲಾ. ಗುಡುಗು ಸಿಡಿಲುಗಳ ಆರ್ಭಟ ಬೇರೆ. ಮಿಂಚು ಫಳ್ಳನೆ ಸುಳಿದಳಿದಾಗ ಮೈ ನಡುಗುವಷ್ಟು ಭಯ-ಭೀತಿ ಮನಸ್ಸಿಗೆ.

ತಾಯಿಯೂ ಮೈಮುದುಡಿ ಅಗ್ಗಿಷ್ಟಿಕೆಯ ಬಳಿ ಕುಳಿತುಕೊಂಡು, ಅಂಗಡಿಯಿಂದ ಯಜಮಾನ ಇನ್ನೂ ಹಿಂದಿರುಗಲಿಲ್ಲವಲ್ಲಾ ಎಂಬ ಚಿಂತೆಯಲ್ಲಿ ಮುಳುಗಿದ್ದಾಳೆ. ತಲೆ ಬಾಗಿಲ ಕರೆ ಗಂಟೆಯನ್ನೇ ನಿರೀಕ್ಷಿಸುತಿದ್ದರು ಕ್ಷಣಕ್ಷಣವೂ, ತಾಯಿ ಮಗಳು. ಅವನು ದೊಡ್ಡ ವ್ಯಾಪಾರಿ. ತುಂಬ ಹಣವಂತ. ಕಾರಿನಲ್ಲಿ ಹಿಂದಿರುಗುತ್ತಾನೆ. ಅಂತಹ ತೊಂದರೆ ಏನೂ ಇಲ್ಲ ಎಂಬುದು ಗೊತ್ತು. ಆದರೂ, ಮನಸ್ಸಿಗೆ ಆತಂಕ.

ಹೊತ್ತು ಇಳಿಮುಖವಾಯಿತು. ಜಡಿ ಮಳೆ ನಿಲ್ಲಲೇ ಇಲ್ಲ. ಯಜಮಾನನೂ ಬರಲಿಲ್ಲ.

ಮುಬುಕುಮಾಟ ನಿತ್ಯ ಮನೆಗೆ ಹಿಂದಿರುಗುವುದು ರಾತ್ರಿ ಎಂಟರ ಹೊತ್ತಿಗೆ. ಈ ಜಡಿ ಮಳೆಯಲ್ಲಿ ಅಲ್ಲೇಕಿರ ಬೇಕು ? ಎಷ್ಟು ಬೇಗನೆ ಹಿಂದಿರುಗಿದರೆ ಅಷ್ಟು ಒಳ್ಳೆಯದು ಎಂಬ ಯೋಚನೆ. ಮಳೆ ಅಂದರೆ ಸಾಮಾನ್ಯ ಮಳೆ ಅಲ್ಲ. ಊರು ಕೇರಿಗಳು ಕೊಚ್ಚಿ ಹೋಗುತ್ತಿವೆ. ಬಿರುಗಾಳಿಯ ಭಯಂಕರ ಬೋರಾಟ ಬೇರೆ. ಹೆಮ್ಮರಗಳು ಲಟಲಟ ಮುರಿದು ಧೊಪ್ಪನೆ ಬೀಳುತ್ತಿವೆ ಬುಡಗಳಚಿ.

ಹಿರಿಯ ಮಗಳು ಮನೇಚಿ ಒಮ್ಮೆ ಕಿಟಿಕಿಯ ಬಳಿಗೆ ಓಡಿದರೆ ಇನ್ನೊಮ್ಮೆ ಅಗ್ಗಿಷ್ಟಿಕೆಯ ಬಳಿಗೆ ಬಂದು "ಅಮ್ಮಾ! ಏನು ಗತಿ? ಊರು ಕೇರಿ ಕೊಚ್ಚಿ ಹೋಗುವುದೇ ಸೈ !" ಎನ್ನುವಳು ಭಯ ಭೀತಿಯ ದನಿಯಲ್ಲಿ. ಮಸುಗಪ್ಪು ತಳೆದಿತ್ತು ಮುಖ ವರ್ಣ.

ಮಾತು ಮುಗಿಯುವುದರೊಳಗಾಗಿ ಮನೆಯ ಪಕ್ಕದ ಭಾರೀ ಮರವೊಂದು ಧೊಪ್ಪನೆ ಬಿತ್ತು !

ಅಬ್ಬ ! ಎಂತಹ ಶಬ್ದ !

ತಾಯಿ ಮಕ್ಕಳಿಗೆ ಮೈಯೆಲ್ಲ ನಡುಕ. ಮಳೆಯ ವರ್ಷಧಾರೆ ಸ್ವಲ್ಪವೂ ಕಡಿಮೆಯಾಗಲಿಲ್ಲ. ಒಂದೇ ಸಮನೆ ಸುರಿಯುತಿತ್ತು, ಧೋ ಧೋ ಎಂದು.

ಸ್ವಲ್ಪ ಹೊತ್ತು ಉರುಳಿ ಗಂಟೆ ಎಂಟರ ಅಂಕಿಯನ್ನು ದಾಟಿತು.

ಮುಬುಕುಮಾಟ-ನ ಕಾರು ಬಂದು ಪೋರ್ಟಿಕೋದಲ್ಲಿ

ನಿಂತಿತು. ಮುದ್ದು ಮಗಳು ಮ್ಯಾಂಡವಿ ತಕ್ಷಣ ಕದ ತೆರೆದು "ಅಪ್ಪಾ ! ನಿನ್ನದೇ ಯೋಚನೆಯಾಗಿತ್ತು !" ಎಂದಳು.

"ಆಫ್ರಿಕದಲ್ಲಿ ಇಂತಹ ಮಳೆ ಅಪರೂಪವೇ ! ಕಾರು ಇಲ್ಲಿಯವರೆಗೆ ಸರಿಯಾಗಿ ಬಂದುದು ವಿಶೇಷ. ಜೀವ ಹಿಡಿದು ಕಾರು ನಡೆಸಿದೆ. ಎಷ್ಟೋ ಕಡೆ ಮನೆಮಠ ಕಾರುಗಳು ಕೊಚ್ಚಿ ಹೋಗಿವೆ! ಸಧ್ಯ ಮಳೆ ನಿಂತರೆ ಸಾಕು!" ಎಂದ, ಬೇಗನೆ ಕದ ಮುಚ್ಚಿಕೊಳ್ಳುತ್ತ.

ಮಡದಿ ಮಕ್ಕಳಿಗೆ ಮಳೆಯು ವಿಚಾರವೇ ಚರ್ಚೆಗೆ ವಿಷಯು.

ಜಿಕೋಸ್ಲೋವೇಕಿಯಾದಿಂದ ಬಂದು ನೆಲಸಿದ ಕುಟುಂಬಕ್ಕೆ ಅಲ್ಲಿ ವ್ಯಾಪಾರ ಸಮೃದ್ಧಿಯಾದುದರಿಂದ ನಿಶ್ಚಿಂತೆಯಾಗಿ ಅಲ್ಲೇ ತಳ ಊರಿತ್ತು. ಶಾಲಾ ಕಾಲೇಜು ಓದುವ ಮಕ್ಕಳಿಗೂ ಸ್ವಂತ ಊರಿನ ಯೋಚನೆ ಮೂಡುತ್ತಿರಲಿಲ್ಲ, ಜೀವನ ಶಾಂತಿಯಿಂದ.

ಸ್ವಲ್ಪ ಹೊತ್ತು ಉರುಳಿತು ; ಮಳೆ ಯಥಾ ಪ್ರಕಾರ ಸುರಿಯುತ್ತಲೇ ಇದೆ.

ತಾಯಿ ಊಟಕ್ಕೆ ಅಣಿಗೊಳಿಸಿದಳು. ಎಲ್ಲರೂ ಊಟ ಮಾಡುತಿದ್ದಂತೆಯೇ ತಲೆ ಬಾಗಿಲ ಕರೆ ಗಂಟೆ ಬಾರಿಸಿತು.

"ಈ ಹೊತ್ತಿನಲ್ಲಿ ಯಾರಿರಬಹುದು ?"

ಆ ಪ್ರಶ್ನೆ ಎಲ್ಲರ ಮುಖದಲ್ಲೂ ಎದ್ದಿತು. ಮನೇಚಿ ಬಾಗಿಲು ತೆರೆದು ನೋಡುತ್ತಾಳೆ ಭೀಮ ಕಾಯದ ನೀಗ್ರೋ ಮನುಷ್ಯ ! ಟಾರಿನ ಕಗ್ಗಪ್ಪನ್ನೂ ಅಣಕಿಸುವಂತಹ ಕಪ್ಪು

ವರ್ಣ. ಮಳೆಯಲ್ಲಿ ತೊಯ್ದು ಹೋಗಿದ್ದಾನೆ. ಮೈಯಲ್ಲಿ ನೀರಿಳಿಯುತ್ತಿದೆ.

ಅವನನ್ನು ನೋಡಿದ ಕ್ಷಣವೇ ಭಯದ ಮೂಟೆಯಾದಳು ಹುಡುಗಿ! ತಕ್ಷಣವೇ ಕದವನ್ನು ದೊಪ್ಪನೆ ಮುಚ್ಚಿ ಓಡಿ ಬಂದು "ಅಪ್ಪಾ! ಯಾರೋ ... ಭಯಂಕರ ವ್ಯಕ್ತಿ!" ಎಂದಳು ತುಟಿಕಚ್ಚಿ.

"ಏನೆಂದು ಕೇಳಬೇಕಾಗಿತ್ತು."

"ಉಹೂ...! ನನಗೆ ತುಂಬಾ ಭಯ!" ಅವನು ಅಸ್ಪೃಶ್ಯ!"

ಆ ಕೂಡಲೇ ಮುಬುಕು ಮಾಟ ಹೊರ ಬಂದು ಕದ ತೆಗೆದ. ಮಗಳು ಹೇಳಿದ ಚಿತ್ರ ಸುಸ್ಪಷ್ಟ. ಒಂದು ಕ್ಷಣ ಅಡಿಯಿಂದ ಮುಡಿಯುವರೆಗೆ ನೋಡಿ ಕೇಳಿದ "ನೀನಾರು? ಈ ಹೊತ್ತಿನಲ್ಲಿ ಇಲ್ಲಿಗೇಕೆ ಬಂದೆ? ನನ್ನಿಂದೇನಾಗಬೇಕು?"

ಅವನು ಒಂದೆರಡು ಗಳಿಗೆ ಯೋಚನೆಗೀಡಾದಂತೆ ನಸು ತತ್ತರಿಸಿದ ನಂತರ ತನ್ನನ್ನು ತಾನೇ ಸುಧಾರಿಸಿಕೊಂಡಂತೆ ದೈನ್ಯತೆಯಿಂದ ನುಡಿದ "ನಾನು ದಿಕ್ಕೆಟ್ಟವ. ಈ ರಾತ್ರಿ ತಂಗಲು ನನಗೊಂದಿಷ್ಟು ಸ್ಥಳ ಬೇಕಾಗಿದೆ. ಜಡಿಮಳೆಯಲ್ಲಿ ಮುಂದೆ ಹೋಗಲಾರೆ."

"ನೀನು ಅತಂತ್ರವಾಗಲು ಕಾರಣ?"

"ಇದುವರೆಗೆ ಮೈಯಲ್ಲಿ ಶಕ್ತಿಯಿತ್ತು. ಕೈತುಂಬ ದುಡಿಯುತಿದ್ದೆ. ಯಜಮಾನ ಅನ್ನ-ಬಟ್ಟೆ ಕೊಡುತಿದ್ದ. ನನಗೀಗ ಮೊದಲಿನಂತೆ ಕೆಲಸ ಮಾಡಲು ಆಗುತ್ತಿಲ್ಲ. ಆದ್ದರಿಂದ ನನ್ನ ದುಡಿಮೆಗೆ ಸೊನ್ನೆ ಬಿತ್ತು."

ಯಜಮಾನನ ಮನಸ್ಸು ಬಿಸಿಲಟ್ಟಿದ ಮಂಜಿನಂತೆ ಕರಗಿತು. ತಕ್ಷಣ "ಬಾರಯ್ಯ, ಸೋದರ. ನಿನಗೆ ತಂಗಲು ಸ್ಥಳ ಕೊಡುವೆ." ಎಂದ.

ಅವನಿಗೆ ಒಣ ಬಟ್ಟೆಗಳನ್ನು ನೀಡಿ ಅಗ್ಗಿಷ್ಟಿಕೆಯ ಬಳಿ ಬೆಂಕಿ ಕಾಯಿಸಿಕೊಳ್ಳಲು ಹೇಳಿದ. ಅನಂತರ ಹೊಟ್ಟೆ ತುಂಬ ಊಟವನ್ನು ನೀಡಿ ಚಾವಡಿಯಲ್ಲಿ ಮಲಗಿಕೊಳ್ಳಲು ಹಾಸಿಗೆ ಕಂಬಳಿಗಳನ್ನೂ ಕೊಟ್ಟು ಸತ್ಕರಿಸಿದ. ಆದರೂ ಆ ಮಕ್ಕಳಿಗೆ ಅವನನ್ನು ನೋಡುವುದೇ ಬೇಡ ಎಂಬಷ್ಟು ಅಂಜಿಕೆ. ಕೋಣೆಯಲ್ಲಿ ಸೇರಿಕೊಂಡು ಅವನ ವಿಚಾರವಾಗಿಯೇ ಚರ್ಚಿಸುತ್ತ "ನಮ್ಮ ಅಪ್ಪನಿಗೆ ಭಯವೂ ಇಲ್ಲ; ಬುದ್ಧಿಯೂ ಇಲ್ಲ," ಎಂಬ ತೀರ್ಮಾನಕ್ಕೆ ಬಂದರು. ಎಳೆಯ ತನುಮನಗಳು ಭಯ-ಜಿಗುಪ್ಸೆಗಳ ಊಟೆಯಾಗಿದ್ದುವು.

ನಾಯಿ ಸರಪಳಿಯನ್ನು ಎಳೆದಾಡುತ್ತ ಕಟ್ಟಿದಲ್ಲೇ ಹೊಸಬರ ವಾಸನೆ ಹಿಡಿದು ಒಂದೇ ಸಮನೆ ಬೊಗಳುತಿತ್ತು. ಅದರ ತಲೆಯನ್ನು ತಟ್ಟಿ ಸಾಂತ್ವನಗೊಳಿಸಿ ಎಲ್ಲರೂ ಅವರವರ ಕೊಠಡಿ ಸೇರಿ ಮಲಗಿದರು. ಮಳೆ ಸುರಿಯುತ್ತಲೇ ಇತ್ತು. ಒಮ್ಮೊಮ್ಮೆ ಸ್ವಲ್ಪ ಹಿಂಜರಿದರೂ ಮತ್ತೆ ಮರುಕಳಿಸುತಿತ್ತು. ಧೋ ಧೋ ಮಳೆಯಿಂದ ಊರೆಲ್ಲಾ ಜಲಮಯ ! ಗುಡುಗು-ಮಿಂಚು-ಸಿಡಿಲು-ಬಿರುಗಾಳಿಗಳ ಆರ್ಭಟಕ್ಕೆ ಎಣೆಯೇ ಇಲ್ಲದ ಅವ್ಯಾಹತ ಧಾಳಿ !

ಮಧ್ಯರಾತ್ರಿ ! ಮಳೆಯ ಘೋರ ಆಟಾಟೋಪದ ಭಯಂಕರ ಅವಾಂತರ.

ಮನೆಯ ಹಿಂಭಾಗದ ಗೋಡೆಯು ಕುಸಿದು ಬಿತ್ತು! ದೊಪ್ಪನೆ ಶಬ್ದ, ಮಕ್ಕಳ ಚೀರಾಟ, ನಾಯಿಯ ಕಿರಿಚಾಟ! ಹೃದಯವಿದ್ರಾವಕವಾದ ರುದ್ರ ಭಯಂಕರ ಚಿತ್ರ! ಆ ತಕ್ಷಣ ಎಲ್ಲರೂ ಎದ್ದರು. ನೀಗ್ರೋ ಮನುಷ್ಯ ಮಕ್ಕಳು ಸಿಕ್ಕಿಕೊಂಡಿದ್ದ ಭಾಗಕ್ಕೆ ನುಗ್ಗಿದ. ಕೊಠಡಿಯ ಮಾಡು ಕುಸಿದಿತ್ತು! ಅವಶೇಷಗಳಡಿಯಲ್ಲಿ ಮಕ್ಕಳು ಸಿಕ್ಕಿಕೊಂಡಿದ್ದಾರೆ!

ತಾಯಿ ಕುಸಿದು ಬಿದ್ದು ಮೂರ್ಛೆ ಹೋದಳು. ತಂದೆಯ ಕಣ್ಣಿಗೆ ಕತ್ತಲೆ ಕವಿಯಿತು. ನೀಗ್ರೋ ಮನುಷ್ಯ ಶತ ಪ್ರಯತ್ನ ಪಟ್ಟು ಮಕ್ಕಳೆಲ್ಲರನ್ನೂ ಬಿಡಿಸಿ ತಂದು ಉಪಕಾರ ಮಾಡಿದ. ತಲೆ ಮೈಕೈಗಳಲ್ಲಿ ಗಾಯಗಳಾಗಿ ನೆತ್ತರು ಇಳಿಯುತಿತ್ತು.

ಮಕ್ಕಳು ಅಳುತ್ತಲೇ "ಜಿಮ್ಮಿ ಒಳಗೇ ಉಳಿಯಿತು! ನಾಯಿ ಬದುಕಿಸಿ! ರಕ್ಷಿಸಿ!" ಎಂದು ಗೋಗರೆದರು. ಬಡ ನಾಯಿ ಪ್ರಾಣಾಂತಕ ದನಿಯಲ್ಲಿ ಒರಲುತ್ತಲೇ ಇದೆ!

ನೀಗ್ರೋ ಮತ್ತೆ ಒಳನುಗ್ಗಿದ. ಅವನಿಗೆ ಭಯವೂ ಇಲ್ಲ. ಜೀವದ ಆಸೆಯೂ ಇಲ್ಲ. ಧೈರ್ಯದಿಂದಲೇ ಒಳನುಗ್ಗಿದ. ಅಷ್ಟರಲ್ಲೇ ಅಂಗಳದಲ್ಲಿನ ಮರವೊಂದರ ಹಿರಿಯ ಕೊಂಬೆ ಮುರಿದು ಇತ್ತಲೇ ಬಿತ್ತು! ನಾಯಿಯ ಒರಲಾಟ! ಮಕ್ಕಳ ಚೀರಾಟ! ತಂದೆ ತಾಯಿಯರ ಗೋಳಾಟ. ಮಳೆ ಗಾಳಿಯ ರಂಪಾಟ ಎಲ್ಲವೂ ಒಗ್ಗೂಡಿ ತಲೆ ಕೆಡಿಸುವಷ್ಟು ಭಯಾನಕ. ಸ್ವಲ್ಪ ಹೊತ್ತಿನೊಳಗಾಗಿ ಅವನು ಹೇಗೆ

ಹೇಗೋ ಕಟ್ಟಿದ ನಾಯಿಯ ಕೊರಳ ಪಟ್ಟಿಯನ್ನು ಬಿಚ್ಚಿ ಹೊರೆಗೆ ಹೊತ್ತು ತಂದ. ಒಂದು ಕಾಲು ಮುರಿದಿದ್ದ ಅದು ಕೂಗುತ್ತಲಿತ್ತು,

ಆ ಹೊತ್ತಿಗೆ ಚೇತರಿಸಿಕೊಂಡ ತಂದೆ ಅವನನ್ನು ಆತ್ಮೀಯತೆಯಿಂದ ಆಲಂಗಿಸಿ ಕೈ ಕುಲುಕುತ್ತ "ನಿನ್ನಿಂದ ಪರಮೋಪಕಾರವಾಯ್ತು ! ರಾತ್ರಿ ನಿನ್ನ ಹೆಸರನ್ನೇ ನಾನು ಕೇಳಲಿಲ್ಲ!

"ಡೇವಿಡ್."

ಆಗ ಮಕ್ಕಳಿಗೆ ಡೇವಿಡ್ನನಲ್ಲಿ ಭಯಕ್ಕೆ ಬದಲಾಗಿ ಪ್ರೇಮ-ಸ್ನೇಹಗಳ ದಿವಿನಾದ ಆಗರವೇ ಆಗರ.

— ೦ —

# ಸೋಡೋಂಗ್

ಕೊರಿಯಾ ದೇಶದಲ್ಲಿ ಸೋಡೋಂಗ್ ಎಂಬ ಬಡ ಹುಡುಗನಿದ್ದ.

ಬಡವ ಅಂದರೆ ಬಡವ. ತಾಯಿ ತಂದೆಯರಿಲ್ಲದ ತಬ್ಬಲಿ ಹುಡುಗ. ಅವನಿಗಿದ್ದುದು ಒಬ್ಬ ಮುದಿ ಅಜ್ಜಿ. ಅವಳೂ ಕೂಡ ದುಡಿಯಲಾರಳು. ಹುಡುಗನ ಸಂಪಾದನೆಯಿಂದ ಇಬ್ಬರ ಜೀವನ.

ಸೋಡೋಂಗ್ ದಿನವೂ ಸಮೀಪದ ಕಾಡುಗಳಿಗೆ ಹೋಗಿ, ಕಾಡಿನ ಆಲೂಗಡ್ಡೆಗಳಿಗಾಗಿ ಹುಡುಕಿ ಹುಡುಕಿ ಅಗೆದೂ ಅಗೆದೂ ಬುಟ್ಟಿಯಲ್ಲಿ ತುಂಬಿಕೊಂಡು ಮನೆಗೆ ತರುತಿದ್ದ. ತಮ್ಮ ಬಳಕೆಗಾಗಿ ಸ್ವಲ್ಪ ಉಳಿಸಿಕೊಂಡು ಹೆಚ್ಚಿನ ಆಲೂಗಡ್ಡೆಯನ್ನು ಮಾರಿ ಸ್ವಲ್ಪ ಹಣ ಗಳಿಸುತಿದ್ದ.

ಆದರೆ ಅದರ ಕಷ್ಟ ಅವನಿಗೇ ಗೊತ್ತು.

ಪುಟ್ಟ ಹುಡುಗ ಪುಟ್ಟ ಕಾಲುಗಳಿಂದ ದೂರದ ಕಾಡಿಗೆ ಹೋಗುವುದೆಂದರೆ ನಡೆದೂ ನಡೆದೂ ಕಾಲುಗಳೇ ನೋಯುತಿದ್ದುವು. ಮೇಲಾಗಿ, ಗಟ್ಟಿ ನೆಲವನ್ನು ಅಗೆಯಬೇಕು. ಪುಟ್ಟ ಕೈಗಳು ಸೋಲುತಿದ್ದುವು. ಅವನು ಬಳಲಿ ಬೆಂಡಾಗುತಿದ್ದ. ಸ್ವಲ್ಪ ಹೊತ್ತು ಮರದಡಿಯಲ್ಲೊ ಹಾಸು

ಬಂಡೆಯ ಮೇಲೋ ಮಲಗಿ ವಿಶ್ರಾಂತಿ ಪಡೆಯುತಿದ್ದ. ಹಾಗೆ ಮಲಗಿದಾಗ ಕಾಡು ಪ್ರಾಣಿಗಳು ಬರಬಹುದು ಎಂಬ ಭಯ ಬೇರೆ. ನಿದ್ದೆ ಮಾಡುವಂತಿಲ್ಲ. ಕಣ್ಣು ಬಿಟ್ಟು ಸುತ್ತ ಮುತ್ತ ನೋಡುತ್ತಲೇ ಇರಬೇಕು.

ಅಜ್ಜಿ ಅವನಿಗಾಗಿ ಮರುಗುತಿದ್ದಳು. ಅವನು ಹಿಂತಿರುಗುವುದನ್ನೇ ಅತೀ ಕಳವಳದಿಂದ ನೋಡುತ್ತ ಕಾಯು ತಿದ್ದಳು. ಕಾಡು ಪ್ರಾಣಿಗಳ ಭಯವೇ ಭಯ ಅವಳಿಗೆ.

ಸೋಡೋಂಗ್ ಹೆದರದೆ "ಅದಕ್ಕೇಕೆ ಭಯ. ಅವು ಬಂದರೆ ಮರ ಹತ್ತಿಕೊಳ್ಳುವೆ"

ಆ ಕೂಡಲೆ ಚಂಗನೆ ಮರ ಹತ್ತಿ ತೋರಿಸುತ್ತ ಕೊಂಬೆ ಯಿಂದ ಕೊಂಬೆಗೆ ಜಿಗಿದಾಡುತಿದ್ದ ಹುಡುಗ.

ಮೊಮ್ಮಗನ ಚಟುವಟಿಕೆಯಿಂದ ಧೈರ್ಯಪಟ್ಟುಕೊ ಳ್ಳುತಿದ್ದಳು ಅಜ್ಜಿ. ಹುಡುಗ ಉಲ್ಲಸಿತನಾಗುತಿದ್ದ. ಇಬ್ಬರ ಬದುಕಿಗೆ ಕೊರತೆ ಇರಲಿಲ್ಲ.

ಒಮ್ಮೆ ಹಾಗೆ ಆಲೂಗಡ್ಡೆಗಳನ್ನು ಅಗೆಯುತಿದ್ದಾಗ ಒಂದು ಬಂಗಾರದ ಗಟ್ಟಿ ದೊರೆಯಿತು. ಥಳಥಳಿಸುವ ಅಪ್ಪಟ ಅಪರಂಜಿ ಗಟ್ಟಿ. ಆದರೆ, ತುಂಬಾ ಭಾರವಾದ ಅದನ್ನು ತೆಗೆದುಕೊಳ್ಳುವುದಿರಲಿ, ಅಲ್ಲಾಡಿಸುವುದೂ ಕಷ್ಟವೇ. ಏನು ಮಾಡಲಿ ಎಂದು ಚಿಂತಿತನಾದ.

ಎಷ್ಟೆಷ್ಟು ಪ್ರಯತ್ನಿಸಿದರೂ ಅವನಿಂದ ಏನು ಮಾಡಲೂ ಸಾಧ್ಯವಾಗಲಿಲ್ಲ. ಕಣ್ಣಿಗೆ ಕಂಡರೂ ಕೈಗೆ ಬಾರದ ಪ್ರಸಂಗ. ಹುಡುಗ ಎತ್ತಲಾರ. ಬಿಟ್ಟು ಹಿಂದಿರುಗಲಾರ.

ಆಗ ಎಲ್ಲಿಯದೋ ಒಂದು ವಾಣಿ ಕೇಳಿಸಿತು ಕಿವಿಗೆ.

"ಸಜಸ ದೇವಾಲಯದಲ್ಲಿರುವ ಚಿವ್ಯೋಂಗ್ ಪೊಪ್ಸ್ ಸಂನ್ಯಾಸಿಯ ಬಳಿಗೆ ಹೋಗು."

ಹುಡುಗ ಸುತ್ತಮುತ್ತಲೂ ನೋಡಿದ ಯಾರೂ ಇರಲಿಲ್ಲ. ಯಾವ ದೇವತೆಯೋ ನನಗಾಗಿ ಮನ ಮರುಗಿ ಅಪ್ಪಣೆ ಕೊಟ್ಟಿದ್ದಾಳೆ. ಎಂದು ಭಕ್ತಿಯಿಂದ ಕೈಮುಗಿದು ಸಜಸ ದೇವಾಲಯದತ್ತ ನಡೆದ. ಹಾದಿ ತಿಳಿದಿತ್ತು. ಆದರೂ ಬಲುದೂರ. ಪುಟ್ಟ ಕಾಲುಗಳು ನಡೆದೇ ನಡೆದುವು. ಮುಂದೆ ಮುಂದೆ ಸಾಗಿ ಹೋಗಿದೆ ಹಾದಿ. ಎಷ್ಟು ನಡೆದರೂ ಮುಗಿಯದೇನೋ ಎಂಬಷ್ಟು ದೂರ. ಒಂದು ಹಗಲೆಲ್ಲಾ ಪಯಣ. ಹೊಟ್ಟೆಯಲ್ಲಿ ಹಸಿವು ಬಾಯಾರಿಕೆ, ಮೈಯಲ್ಲಿ ಆಯಾಸ ಬಳಲಿಕೆ. ಆದರೂ ಬಿಡಲಿಲ್ಲ ಹುಡುಗ. ದೇವಾಲಯವನ್ನು ತಲುಪಿದ. ಅಂಗಳದಲ್ಲಿ ಒಂದು ನೀರು ತುಂಬಿದು ಕೆರೆ. ಹುಡುಗ ಕೈಕಾಲು ತೊಳೆದು ಹೊಟ್ಟೆ ತುಂಬಾ ನೀರ ಕುಡಿದು ಸಂನ್ಯಾಸಿಯ ಬಳಿಗೆ ಹೋದ.

ಆ ಸಂನ್ಯಾಸಿಯ ಮುಂದೆ ತನ್ನ ಬಡತನದ ಕತೆಯನ್ನೆಲ್ಲಾ ಹೇಳಿದನಂತರ ತನಗೆ ದೊರೆತ ಬಂಗಾರದ ಗಟ್ಟಿಯನ್ನೂ ಮತ್ತು ಅದನ್ನು ಅಲುಗಿಸಲಾರದ ಪರಿಸ್ಥಿತಿಯನ್ನೂ ಹೇಳಿಕೊಂಡ.

ಸಂನ್ಯಾಸಿ ಎಲ್ಲವನ್ನೂ ಸಮಾಧಾನದಿಂದ ಕೇಳಿ ನುಡಿದ,

"ಮಗನೇ, ನಿನ್ನ ಸಾಹಸಕ್ಕೆ ಮೆಚ್ಚಿದೆ. ನೀನು ಭಕ್ತಿ ಸಂಪಾದಿಸಬೇಕು. ಈಗ ಈ ಕೆರೆಯಲ್ಲಿ ಪವಿತ್ರ ಸ್ನಾನ

ಮಾಡಿ ಇಕ್ಸನ್-ಗುನ್-ನಲ್ಲಿ ಪುಕ್ಕೊ ದೇವತೆಯನ್ನು ಧ್ಯಾನಿಸು. ಅವಳು ಕರುಣಾಮಯಿ. ನಿನ್ನ ಅಭೀಷ್ಟ ವನ್ನು ನೆರವೇರಿಸುತ್ತಾಳೆ."

ಸೋಡೋಂಗ್ ಸಂತುಷ್ಟನಾಗಿ ಕೆರೆಯಲ್ಲಿ ಪವಿತ್ರ ಸ್ನಾನಮಾಡಿ ಬಂದು ದೇವತೆಯನ್ನು ಭಯಭಕ್ತಿಯಿಂದ ಪ್ರಾರ್ಥಿಸಿದ. ಅಷ್ಟರಲ್ಲಿ ಕತ್ತಲೆ ಕವಿಯಿತು. ದೇವಾಲಯದ ಆವರಣ ತುಂಬಾ ಶಾಂತಯುತವಾಗಿತ್ತು. ಸಂನ್ಯಾಸಿಯು ಕೊಟ್ಟ ಆಹಾರವನ್ನು ಭುಂಜಿಸಿ ಸೋಡೊಂಗ್ ಅಲ್ಲಿಯೇ ಮಲಗಿದ. ಈ ದಿನ ರಾತ್ರಿಯೆಲ್ಲಾ ಅಜ್ಜಿ ನನ್ನ ಯೋಚನೆ ಯಲ್ಲಿ ಪರಿತಪಿಸುತ್ತಾಳೆ ಎಂಬ ಯೋಚನೆಯೂ ಬಂತು. ಆದರೆ ವಿಧಿಯಿಲ್ಲ.

ಹುಡುಗ ಅದೇ ಯೋಚನೆಯಲ್ಲಿ ಮಲಗಿ ನಿದ್ದೆ ಹೋದ.

ಮಧ್ಯರಾತ್ರಿ.

ಕನಸಿನಲ್ಲಿ ಪುಕ್ಕೊ ದೇವತೆ ಪ್ರತ್ಯಕ್ಷಳಾಗಿ ಬಂದಿದ್ದಾಳೆ. ಧವಳ ಕಾಂತಿಯಿಂದ ಬೆಳಗುತಿದ್ದಾಳೆ. ಬಿಳಿಯ ರೆಕ್ಕೆಗಳು, ಜಗಜಗಿಸುವ ವಜ್ರದ ಬಿಳಿಯ ಕಿರೀಟ. ಕಣ್ಣು ಕುಕ್ಕು ವಂತಹ ರೂಪು. ಹುಡುಗ ಅತ್ಯಾಶ್ಚರ್ಯದಿಂದ ನೋಡಿ ಕೈ ಮುಗಿದ. ಭಯಭಕ್ತಿಯಿಂದ ಕಣ್ಣುಗಳು ತುಂಬಿ ಬಂದುವು.

ಪುಕ್ಕೊ ದೇವತೆ ಸಂತೋಷದಿಂದ ನುಡಿದಳು,

"ಮಗುವೆ, ನಿನ್ನ ಬುದ್ಧಿ ಭಕ್ತಿಗಳಿಗೆ ಮೆಚ್ಚಿದೆ. ನಾಳೆ ನೀನು ಹಿಂದಿರುಗಿ ಹೋಗು. ಆ ಚಿನ್ನದ ಗಟ್ಟಿಯನ್ನು

ಮುಟ್ಟಿದರೆ ಹಗುರಾಗುತ್ತದೆ. ತೆಗೆದುಕೊಂಡುಹೋಗು. ಆದರೆ ನೀನು ಬಲು ಬುದ್ಧಿವಂತಿಕೆಯಿಂದ ವರ್ತಿಸಬೇಕು."

ಸೋಡೋಂಗ್ ಬೆಳಗ್ಗೆ ಎದ್ದವನೇ ಪುಕ್ಕೊ ದೇವತೆಯನ್ನು ಪೂಜಿಸಿ, ಸಂನ್ಯಾಸಿಗೆ ವಂದಿಸಿ ತನ್ನ ಊರಿನ ಅಭಿಮುಖವಾಗಿ ಹೊರಟ. ನಡಿಗೆ ಸುಖವಾಗಿ ಸಾಗಿತು. ದೂರದ ಹಾದಿ. ತಲೆಯ ಮೇಲೆ ರಣರಣಿಸುವ ಬಿಸಿಲು. ಮೈಯಲ್ಲಿ ಬೆವರು ಇಳಿದು ಹೋಯಿತು. ಹುಡುಗ ದಣಿದರೂ ಲೆಕ್ಕಿಸದೆ ತಾನು ಚಿನ್ನದ ಗಟ್ಟಿಯನ್ನು ಕಂಡೆಡೆಗೆ ಹೋಗಿ ತಲುಪಿದ. ತನ್ನ ಬುಟ್ಟಿ ಚಿನ್ನದ ಗಟ್ಟಿ ಎರಡೂ ಅಲ್ಲಿಯೇ ಇದ್ದವು. ಹಸಿವು ಕಳೆಯಲು ಹಸಿ ಆಲುಗಡ್ಡೆಗಳನ್ನೇ ತಿಂದು ಸ್ವಲ್ಪ ಹೊತ್ತು ದಣಿವಾರಿಸಿಕೊಂಡು ಚಿನ್ನದ ಗಟ್ಟಿಯನ್ನು ಮುಟ್ಟಿದರೆ ನಿಜವಾಗಿಯೂ ಹಗುರ. ಹುಡುಗ ಪುಕ್ಕೊ ದೇವತೆಯನ್ನು ಮನಸಾ ವಂದಿಸಿ ಬುಟ್ಟಿಯ ತಳದಲ್ಲಿ ಚಿನ್ನದ ಗಟ್ಟಿಯನ್ನಿಟ್ಟು ಮೇಲೆ ಆಲೂಗಡ್ಡೆಗಳನ್ನು ತುಂಬಿಕೊಂಡು ಮನೆಯ ಕಡೆ ಹೊರಟ.

ಚಿನ್ನದ ಗಟ್ಟಿಯನ್ನು ಹೇಗೆ ಮಾರಲಿ ? ತನ್ನಂತಹ ಹುಡುಗನನ್ನು ಹೊಡೆದು ಯಾರಾದರೂ ಕಿತ್ತುಕೊಳ್ಳಬಹುದು. ವರ್ತಕರು ವಂಚಿಸಬಹುದು. ಹೇಗೆ ನ್ಯಾಯವಾದ ವಿತರಣೆ? ಎಂಬ ಯೋಚನೆ ತಲೆಯನ್ನು ತುಂಬಿತು. ಪುಕ್ಕೊ ದೇವತೆ ಬುದ್ಧಿವಂತಿಕೆಯಿಂದ ವರ್ತಿಸು ಎಂದುದು ಗವನಕ್ಕೆ ಬಂತು.

ಯಾರು ನೋಡಿದರೂ ನನ್ನಿಂದ ಕಸಿಯದೆ ಬಿಡರು. ಅಂಗಡಿಯಲ್ಲಿ ವಿಕ್ರಯಿಸುವುದೂ ಸಾಧ್ಯವಿಲ್ಲ. ಆದ್ದರಿಂದ

ಅರಮನೆಗೆ ಕೊಂಡೊಯ್ದು ರಾಜನಿಗೆ ಸಮರ್ಪಿಸಿದರೆ ಚಿಂತೆಯೇ ಇಲ್ಲ. ಪುಕ್ಕೊ ದೇವತೆ ಎಚ್ಚರಿಸಿದ್ದೂ ಸರಿಯೆ. ರಾಜನಿಗೆ ಕೊಡುವುದೇ ಸರಿಯಾದ ಕ್ರಮ ಎಂದುಕೊಂಡು ಅರಮನೆಗೆ ನೇರವಾಗಿ ಹೋದ.

ಅಲ್ಲಿ ರಾಜನನ್ನು ಕಂಡು ವಿಷಯವನ್ನು ತಿಳಿಸಿ ಚಿನ್ನದ ಗಟ್ಟಿಯನ್ನು ತೋರಿದ.

ಹುಡುಗನ ಪ್ರಾಮಾಣಿಕತೆಗೆ ಮೆಚ್ಚಿ ಅವನ ಜೀವನಕ್ಕೆ ಬೇಕಾದ ಅನುಕೂಲಗಳನ್ನು ಮಾಡಿಕೊಟ್ಟು ಹುಡುಗನನ್ನು ಶಾಲೆಗೆ ಸೇರಿಸಿ ವಿದ್ಯಾವಂತನನ್ನಾಗಿ ಮಾಡಿ ಅರಮನೆಯ ಚಾಕರಿಗೆ ನಿಯಮಿಸಿಕೊಂಡ ರಾಜ.

ಅಜ್ಜಿಯೂ ಮೊಮ್ಮಗನೊಂದಿಗೆ ಸುಖವಾಗಿ ಬಾಳಿದಳು.

— ೦ —

# ಮಧುರಾನಿ

ಮಧುರಾಪುರಿ ಒಂದು ಸರ್ವೆ ಸಾಮಾನ್ಯ ನಗರಿ. ಶಾಲೆಗಳಿರದ ಊರು. ಜನ ಕಲಿತವರಲ್ಲ, ಬುದ್ಧಿವಂತರೂ ಅಲ್ಲ.

ಜಡತನ-ಬಡತನ ಒಟ್ಟಾಗಿ ರಾಜ್ಯ ಆಳುತಿದ್ದುವು ಅಲ್ಲಿ. ಜನರಿಗೆ ಒಳ್ಳೆಯ ಬೆಳೆ ಬೆಳೆಯುವುದಾಗಲೀ ಒಳ್ಳೆಯ ಉದ್ಯೋಗ ಬೆಳೆಸುವುದಾಗಲೀ ಬೇರೆ ಕಸುಬು ಮಾಡುವುದಾಗಲೀ ತಿಳಿಯದು. ತೀರಾ ಅಡ್ಡಾದಿಡ್ಡಿ ಬದುಕು. ಹೇಗೋ ಹಾಗೆ ಹೊಲದಲ್ಲಿ ಅಷ್ಟಿಷ್ಟು ದುಡಿದು ತಿನ್ನುತ್ತ ಬದುಕುವುದು ಗೊತ್ತು.

ಹಕ್ಕಿಗಳು ಹಾಡುವಾಗಲೆಲ್ಲ ಚೀಂ ಚೀಂ ಚೀಂ ಜಡಭರತರೇ ಎಚ್ಚೆತ್ತುಕೊಳ್ಳಿ ಎಂದು ಹಾಡುತಿದ್ದುವು.

ಸುಯ್ಗಾಳಿ ಬೀಸುವಾಗ ಸುಯ್ಯನೆ ಸುಯ್ದು ಜಡಭರತರೇ ಜಡನಿದ್ರೆ ಬಿಡಿ ಎಂದು ಬೀಸಿ ಬೀಸಿ ಎಚ್ಚರಿಸುತಿತ್ತು.

ನಾಯಿಗಳು ಬೊಗಳುವಾಗಲೂ ಬೌ ಬೌ ವೂ ವೂ ಜಡಭರತರೇ ಜಗತ್ತು ನಾಗಾಲೋಟದಿಂದ ಓಡುತ್ತಿದೆ. ನೀವು ಕಣ್ತೆರೆದು ನೋಡಿ, ಎಂದೇ ಬೊಗಳುತ್ತವೆ.

ಆದರೂ ಅವರಿಗೆ ಹೊರ ಜಗತ್ತಿನ ಅರಿವಿಲ್ಲ. ತಮ್ಮನ್ನು ಸುಧಾರಿಸಿಕೊಳ್ಳುವ ಗೋಜಿಗೂ ಹೋಗಲಿಲ್ಲ. ಇದ್ದ ರೀತಿ ಹೋಗಲಿಲ್ಲ. ಹೊಸ ಸ್ಥಿತಿ ಬರಲಿಲ್ಲ. ಶೌಚ ದರಿವು ಇರಲಿಲ್ಲ. ಸ್ವಚ್ಛತೆ ಮೈಲಿ ಮೈಲಿ ದೂರ. ಊರಿನ ನಿರ್ಮಾಲೀಕರಣ ಯಾರಿಗೂ ಬೇಕಾಗಿರಲಿಲ್ಲ. ಆದರೂ ಆ ದರಿದ್ರಸ್ಥಿತಿಯನ್ನೇ ನೆಚ್ಚಿದ ಜನರಿಗೆ ಕಿಂಚಿತ್ತೂ ದುಃಖವಿಲ್ಲ; ಸುಖ ಶಾಂತಿ ಬೇಕಿಲ್ಲವೇನೋ ಎಂಬಷ್ಟು ಜಡಸ್ಥಿತಿ.

o o o o

ಊರಿನ ಪಕ್ಕದಲ್ಲಿ ಒಂದು ಮಹಾ ಸರೋವರ.

ಸ್ವಚ್ಛ ನೀರಿನಿಂದ ಥಳಥಳಿಸುತಿದ್ದ ಅದರಲ್ಲಿ ಕಮಲ ಗಳ ಹೂಗಳು ಅರಳಿದ್ದುವು. ಅವುಗಳಲ್ಲಿ ಜಲದೇವತೆ ಮಧುರಾಕ್ಷಿ ನೆಲೆಸಿದ್ದಾಳೆಂದು ಜನರ ನಂಬಿಕೆ. ಅರಿಸಿನ ಕುಂಕುಮ ಹಾಕಿ ದೀಪಾಂಜಲಿಯನ್ನು ನೀರಿನ ಮೇಲೆ ಬಿಟ್ಟು ಪೂಜಿಸುತಿದ್ದರು ಆಗಾಗ. ಅಲ್ಲದೆ, ಕೋತಿಗಳಲ್ಲಿ ಭಕ್ತಿ, ಹಾವು ಗಳಲ್ಲಿ ಭಕ್ತಿ, ಇದ್ದುದರಿಂದ ಅವುಗಳಿಗೆ ರಾಜೋಪಚಾರ.

ಕೋತಿಗಳು ಹಣ್ಣು ತರಕಾರಿಗಳನ್ನು ಕಿತ್ತು ತಿನ್ನು ತಿದ್ದುವು. ನಾಗರ ಕಲ್ಲುಗಳಿಗೆ ಹಾಲೆರೆಯುತಿದ್ದರು. ಮಕ್ಕಳ ಹಾಲು ಹಣ್ಣುಗಳು ವ್ಯರ್ಥವಾಗುತಿದ್ದುದರ ಅರಿವು ಅವರಿಗಿರಲಿಲ್ಲ.

ಕೆರೆಯ ನೀರನ್ನು ದಿನವೂ ಎಲ್ಲ ಬಗೆಯ ಉಪಯೋಗ ಕ್ಕಾಗಿ ಬಳಸುತ್ತ ಮಲಿನ ಗೊಳಿಸುತಿದ್ದರು. ಜಲದೇವತೆ ಮಧುರಾಕ್ಷಿಯು ಮುನ್ನೀರನ್ನು ಕೋಡಿ ಹರಿಸಿ ಸ್ವಚ್ಛ

ಗೊಳಿಸಿಕೊಳ್ಳುತ್ತಿದ್ದಳು. ಆದರೂ ಜನ ಮಲಿನಗೊಳಿಸುವುದನ್ನು ಬಿಡುತ್ತಿರಲಿಲ್ಲ.

ಕೆರೆಯಲ್ಲಿದ್ದ ಮಂಡರಗಪ್ಪೆ ಅಸಮಧಾನದಿಂದ ಕೂಗಿತು "ಜಡಭರತರೇ, ನಿಮ್ಮ ಸ್ಥಿತಿಗತಿ ನಿಮಗೆ ನಾಚಿಕೆ ತರುವಂತಾದ್ದು ! ಇನ್ನಾದರೂ ಒಳಗಣ್ಣು ತೆರೆಯಿರಿ. ವಟರ್ ರ್ ರ್ ರ್ ರ್.

o o o o

ಜಡಭರತರು ತಮ್ಮ ಬದುಕಿನಾಚೆಯ ಬದುಕನ್ನು ಕಂಡರಿಯರು. ಕೇಳಿ ತಿಳಿಯರು. ಯಾರ ಹಿತವಾದವೂ ಅವರಿಗೆ ಕಿಂಚಿತ್ತೂ ಅರ್ಥವಾಗುತ್ತಿರಲಿಲ್ಲ. ಬದುಕನ್ನು ಎಂದಿನಂತೆಯೇ ಸಾಗಿಸುತಿದ್ದರು.

ಆ ಊರಿನಲ್ಲಿ ಬೇಡನೊಬ್ಬನಿದ್ದ. ಅವನು ದಿನವೂ ಕಾಡಿಗೆ ಮಡದಿಯೊಡದೆ ಹೋಗುತಿದ್ದ. ಅಲ್ಲಿದ್ದ ಒಣ ಕಟ್ಟಿಗೆಗಳನ್ನು ಆರಿಸಿ ತಂದು ಮಾರಿ ಜೀವಿಸುತಿದ್ದರು ಅವರು ಬಹಳ ಕಾಲದಿಂದ.

ಹೆಂಡತಿಯ ಹೆಸರು ಮಧುರಾನಿ. ಅವಳು ವಿದ್ಯೆ ಕಲಿಯದಿದ್ದರೂ ವ್ಯವಹಾರದಲ್ಲಿ ಕಾರ್ಯ ಕುಶಲತೆಯಲ್ಲಿ ಬಲೂ ಜಾಣೆ. ಅವರಿಗೆ ಎಂಟು ಮಂದಿ ಮಕ್ಕಳು. ಎಲ್ಲರೂ ಎಲ್ಲೆಲ್ಲೊ ನೆಲೆಸಿದ್ದರು ಹೊರಹೋಗಿ. ಆ ತಂದೆ ತಾಯಿಗಳನ್ನು ನೋಡಿಕೊಳ್ಳುವ ಶ್ರಮ ಯಾರಿಗೂ ಬೇಕಿರಲಿಲ್ಲ. ತಂದೆ ತಾಯಿಯ ಕಷ್ಟವನ್ನು ಸ್ವಲ್ಪವೂ ಗಮನಕ್ಕೆ ತೆಗೆದುಕೊಳ್ಳದ ಹುಂಬರು, ಅವರಿಗೆ ಕರುಣೆ–ಪ್ರೀತಿಗಳೂ ಇಲ್ಲ.

ಮಕ್ಕಳ ದುಷ್ಟತನದಿಂದ ವೃದ್ಧಾಪ್ಯದಲ್ಲೂ ದುಡಿದು ತಿನ್ನುವ ಪರಿಸ್ಥಿತಿ ಬಂತು ಇಬ್ಬರಿಗೂ. ಆದರೂ ಜಗ್ಗಲಿಲ್ಲ ದಂಪತಿಗಳು. ಅರೆಹೊಟ್ಟೆಯುಂಡು ಬದುಕುತ್ತಿದ್ದರು. ಮಕ್ಕಳನ್ನು ಬೇಡಲಿಲ್ಲ. ಜಲದೇವತೆ ಮಧುರಾಕ್ಷಿಯನ್ನು ಭಕ್ತಿಯಿಂದ ಪೂಜಿಸುತ್ತ ಕಷ್ಟವನ್ನು ಸಹಿಸಿಕೊಂಡಿದ್ದರು. ಮಧುರಾನಿ ನೀರಿಗೆ ಹೋದಳೆಂದರೆ ಜಲದೇವತೆಗೆ ವಂದಿಸದೆ ಬರುತ್ತಿರಲಿಲ್ಲ.

ಒಮ್ಮೆ ಕನಸಿನಲ್ಲಿ ಮಧುರಾನಿ ಪ್ರತ್ಯಕ್ಷಳಾಗಿ ಹೇಳಿದಳು,

"ಮಧುರಾನಿ, ಚಿಂತಿಸಬೇಡ. ಇಂದು ಕಾಡಿಗೆ ಹೋದಾಗ ಆಲದ ಮರದ ಬುಡದಲ್ಲಿ ನೋಡು. ಒಂದು ಕರಿಗಲ್ಲಿನ ಶಿವಲಿಂಗವಿದೆ. ಅದನ್ನು ತಂದು ಪೂಜಿಸು ನಿನಗೆ ಒಳ್ಳೆಯದಾಗುತ್ತೆ."

ಆ ಮಾತಿನಿಂದ ಸಂತುಷ್ಟಳಾದಳು ಮಧುರಾನಿ.

ಕಾಡಿಗೆ ಹೋದಾಗ ಆಲದ ಮರದ ಬುಡಕ್ಕೆ ಹೋಗಿ ಹುಡುಕಿದರೆ ನಿಜವಾಗಿಯೂ ಶಿವಲಿಂಗ ಸಿಕ್ಕಿತು. ಮಣ್ಣು ಮೆತ್ತಿಕೊಂಡಿದ್ದ ಅದು ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಕೂಡಲೇ ಹೆಕ್ಕಿಕೊಂಡಳು ಅವಳು. ಚಿಕ್ಕದಾದ ಅದು ಬಲೂ ಸುಂದರವಾಗಿತ್ತು. ಅದನ್ನು ತರುತಿದ್ದಾಗ ಬ್ರಾಹ್ಮಣನೊಬ್ಬ ಎದುರಾಗಿ ಬಂದ.

ಇಬ್ಬರೂ ಅವನನ್ನು ಕೇಳಿದರು "ಇದನ್ನು ಪೂಜಿಸುವ ಬಗೆ ಹೇಗೆ ?"

ಆ ಬ್ರಾಹ್ಮಣ ಬೇಡರ ಸ್ಥಿತಿಗಳನ್ನು ನೋಡಿ ತಿರಸ್ಕಾರ ದಿಂದ ಅಂದ "ಚಿತಾಭಸ್ಮ ಹಚ್ಚಿ ಪೂಜಿಸು."

ಬ್ರಾಹ್ಮಣ ವಾಕ್ಯ ವೇದವಾಕ್ಯವೆಂಬ ನಂಬುಗೆ ಮನದಲ್ಲಿ. ಇಬ್ಬರೂ ಮಸಣಕ್ಕೆ ಹೋಗಿ ಚಿತಾಭಸ್ಮಕ್ಕಾಗಿ ಹುಡುಕಿದರು. ಯಾರೂ ಹೆಣ ಸುಟ್ಟಿರಲಿಲ್ಲವಾದುದರಿಂದ ಚಿತಾಭಸ್ಮ ಸಿಗಲಿಲ್ಲ. ಏನು ಮಾಡುವುದೆಂದು ಯೋಚನೆ ಹತ್ತಿತು ದಂಪತಿಗಳಿಗೆ.

ಂ ಂ ಂ ಂ

ಮಧುರಾನಿ ಹೇಳಿದಳು "ನಾವು ಅರಹೊಟ್ಟೆಯಲ್ಲಿ ಬದುಕುವುದಕ್ಕಿಂತ ಸಾಯುವುದು ಲೇಸು. ನಾನು ಸಾಯುವೆ. ನೀನು ನನ್ನನ್ನು ಭಸ್ಮ ಮಾಡಿ ಪೂಜಿಸು. ನಿನಗೆ ಮುಂದೆ ಒಳ್ಳೆಯದಾಗುತ್ತೆ."

"ಅಯ್ಯೋ, ನೀನು ಸತ್ತರೆ ನನ್ನ ಗತಿಯೇನು ?" ಎಂದ ಬೇಡ.

"ಸರಿ..., ಅದಕ್ಕೇಕೆ ಯೋಚನೆ ? ಹೇಗಾದರೂ ಒಮ್ಮೆ ಸಾಯುವುದುಂಟಲ್ಲ ?"

"ಆದಾಗದು, ನಾನೇ ಸಾಯುವೆ. ನೀನು ನನ್ನನ್ನು ಸುಟ್ಟು ಚಿತಾ ಭಸ್ಮ ಮಾಡಿಕೊ."

ಅವಳು ಆದಕ್ಕೊಪ್ಪದೆ "ನಾನೊಲ್ಲೆ." ಎಂದಳು.

ಬುಲ್ ಬುಲ್ ಹಕ್ಕಿ ಚೀಂ ಚೀಂ ಎಂದು ಕೂಗಿ ಹೇಳಿತು "ಮಧುರಾನೀ ನೀನು ದೃಢ ಮನಸ್ಸು ಮಾಡು."

ಹಾಗೆಂದರೇನೋ? ಅರ್ಥವಾಗಲಿಲ್ಲ ಮಧುರಾನಿಗೆ.

ಚಂಡೋಲ ಹಕ್ಕಿ ಚೀಂ! ಚೀಂ! ಕೂಗಿತು "ಮಧುರಾನಿ ದೃಢ ಮನಸ್ಸು ಮಾಡು."

ಮಧುರಾನಿ ಅದರ ಕೂಗನ್ನು ಕಿವಿಗೊಟ್ಟು ಆಲೈಸಿದಳು. ಮೈಮನಗಳಲ್ಲಿ ಹುರುಪು ಮಾಡಿತು. ಮಧುರಾಕ್ಷಿ ದೇವತೆಯನ್ನೂ ಶಿವಲಿಂಗವನ್ನೂ ನೆನೆನೆನೆದು ಧ್ಯಾನಿಸಿ ಮೈಗೆ ಬೆಂಕಿ ಹಚ್ಚಿಕೊಂಡಳು. ಬೇಡ ಹೊರಗಡೆಯಿಂದ ಧಾವಿಸಿ ಬರುವುದರೊಳಗಾಗಿ ಅವಳು ಸುಟ್ಟು ಸತ್ತೇ ಹೋಗಿದ್ದಳು.

ಆ ಬೇಡ ಅತ್ತು ಗೋಳಾಡುತ್ತ ಅವಳನ್ನು ಸುಟ್ಟು ಭಸ್ಮ ಮಾಡಿದ.

ೊ ೊ ೊ ೊ

ಬೂದಿ ಆರಿ ತಣ್ಣಗಾಗಲೆಂದು ಒಂದಿನ ಕಾದಿದ್ದು ಅನಂತರ ಬೂದಿಯನ್ನು ಹೆಕ್ಕಿ ಮಡಕೆಗೆ ತುಂಬಿ ಶಿವಲಿಂಗದ ಪಕ್ಕದಲಿಟ್ಟು ಶಿವಲಿಂಗಕ್ಕೆ ಚಿತಾ ಭಸ್ಮ ಬಳಿದು ನಮಸ್ಕರಿದ.

ಆಗ ಶಿವಲಿಂಗ ಹೇಳಿತು "ಮಧುರಾನಿ" ಎಂದು ಮೂರು ಸಲ ಕೂಗಿ ಕರೆ.

ಬೇಡ ಕೂಡಲೇ "ಮಧುರಾನಿ" ಎಂದು ಮೂರು ಸಲ ಕೂಗಿ ಕರೆದ.

ಆ ಕೂಡಲೇ ಮಧುರಾನಿ ಪ್ರತ್ಯಕ್ಷಳಾದಳು ! ಒಡನೆ ಶಿವಲಿಂಗ ಮೆಚ್ಚಿ ಪ್ರಸನ್ನತೆಯಿಂದ ನುಡಿಯಿತು,

"ನಿಮ್ಮ ಭಕ್ತಿಗೆ ಮೆಚ್ಚಿದೆ. ಏನು ಬೇಕೋ ವರವನ್ನು ಬೇಡಿಕೊಳ್ಳಿ."

ಇಬ್ಬರೂ ಕೈಮುಗಿದು ಅಡ್ಡ ಬಿದ್ದು ಭಕ್ತಿಯಿಂದ ನುಡಿದರು,

"ನಮಗೆ ಏನೂ ಬೇಡ ಶಿವನೇ ! ಸದಾ ನಿನ್ನ ಅನುಗ್ರಹ ಇದ್ದರೆ ಸಾಕು."

"ತಥಾಸ್ತು"

ಅಂದಿನಿಂದ ಅವರ ಜೀವನ ಸುಖವಾಗಿತ್ತು.

— ० —

# ಕಲ್ಯಾಣಿ ರಾಗಿಣಿ

ಸರೋಜಿನಿ ಪುಟ್ಟ ಹುಡುಗಿಯಾದರೂ ಸಂಗೀತ ಪ್ರಿಯೆ.

ಹತ್ತು ವಸಂತಗಳನ್ನು ಕಂಡ ಅವಳ ಮೈ ಬಲೂ ಸೊಂಪು.

ಹುಡುಗಿ ಬಹಳ ಮುದ್ದು ಮುದ್ದು. ತಂದೆ ತಾಯಿಯರಿಗೂ ಮುದ್ದು. ಶಾಲೆಯಲ್ಲಿ ಅಚ್ಚುಮೆಚ್ಚು. ಅವಳ ಜೋತೆಗಾತಿಯರು "ನೀನು ಬೆಣ್ಣೆಯಿಂದ ಮಾಡಲ್ಪಟ್ಟವಳೇನೋ ಅದಕ್ಕೇ ಎಲ್ಲರಿಗೂ ನೀನು ಮುದ್ದು !" ಎನ್ನುವರು.

"ನೀವು ಕೂಡ ಹಾಗೇ ಇದ್ದೀರಲ್ಲ. ನೀವೇನು ಕಡಿಮೆ ?"

"ಬಿಡು ಬಿಡು. ನೀನು ತುಂಬಾ ಅದೃಷ್ಟವಂತೆ !"

ಹೀಗೆ ಸಾಗುವುದು ಅವರ ಮಾತುಕತೆ.

ಅವಳ ಕಂಠ ಸ್ವರ ಮಾಧುರ್ಯ ಬಹಳ ಇಂಪು ಕಿವಿಗಳಿಗೆ. ಅವಳು ಸಂಗೀತ ಹಾಡುತಿದ್ದರೆ ಕಿವಿಗೊಟ್ಟು ಕೇಳುತಿದ್ದರು ಜನ. ಅವಳಿಗೆ ಕಲ್ಯಾಣಿ ರಾಗದ ಮೇಲೆ ತುಂಬಾ ಆಸೆ. ಆದರೆ ಅದೇ ಅವಳಿಗೆ ಮನಗೂಡಿರಲಿಲ್ಲ. ಎಷ್ಟೆಷ್ಟು

ಪ್ರಯತ್ನಿಸಿದರೂ ಅದು ಉಣೆಚಿಕೊಳ್ಳುತ್ತಿದ್ದುದು ಅವಳಿಗೆ ತುಂಬಾ ಸಂಕಟ ಮೂಡಿಸಿತ್ತು. ಆದರೂ, ಹುಡುಗಿ ಅದಕ್ಕಾಗಿ ಬಹಳವಾಗಿ ಪ್ರಯತ್ನಿಸುತ್ತಿದ್ದಳು. ಪ್ರಯತ್ನಿಸಿಯೂ ಸೋತು ಹೋದಾಗ ಕಣ್ಣುಗಳು ಕಂಬನಿ ತಳೆಯುತ್ತಿದ್ದುವು. ಅವಳು ಒಂದೆರಡು ದಿನ ಬೇಸರದಿಂದ ಸಂಗೀತಾಭ್ಯಾಸವನ್ನು ಕೈ ಬಿಟ್ಟು ಚಿಂತೆಗೀಡಾಗುತ್ತಿದ್ದಳು. ಅಳು. ಅಳು. ಅಳು. ಸದಾ ಅಳು.

ಅಂದು ಗೆಳತಿ ಕಾವೇರಿ ಬಂದಾಗ ಅವಳ ಸಂಕಟವನ್ನು ಕಂಡು ನುಡಿದಳು,

"ನೀನು ಅಭ್ಯಾಸವನ್ನು ಆರಂಭಿಸುವ ಮುನ್ನ ಗುರುಗಳನ್ನು ಧ್ಯಾನಿಸು. ಗುರುಗಳು ಇಲ್ಲದಿದ್ದರೆ ವಿದ್ಯಾಭ್ಯಾಸಕ್ಕೆ ಗೂಡದು. ಹಿರಿಯ ಸಂಗೀತ ಗುರುಗಳನ್ನು ಧ್ಯಾನಿಸು, ಮುಂದೆ ಒಳ್ಳೆಯದಾಗಬಹುದು."

ಅದು ಸರಿಯೆನಿಸಿತು ಸರೋಜಿನಿಗೆ. ಗುರುವಿಲ್ಲದೆ ಯಾವ ವಿದ್ಯೆಯೂ ಕೈಗೂಡುವುದಿಲ್ಲ ನಿಜ.

ಅನಂತರ ಗುರುಗಳನ್ನು ಮನದಲ್ಲಿ ನೆನೆಯುವ ಅಭ್ಯಾಸವನ್ನು ಇಟ್ಟುಕೊಂಡಳು ಸರೋಜಿನಿ. ಎಲ್ಲಾ ಸಂಗೀತ ಕಾರ್ಯಕ್ರಮಗಳಲ್ಲೂ ಸಂಗೀತ ಅಭ್ಯಾಸ ಮಾಡುವುದು ಅನಿವಾರ್ಯ.

ಗೆಳತಿ ಸೌಭಾಗ್ಯ ಬಂದಾಗಲೆಲ್ಲಾ "ನೀನು ಹಾಡು ನಾನು ಕೇಳುವೆ" ಎನ್ನುತ್ತಿದ್ದಳು.

"ನೀನು ಬಂದಿರುವೆ ಆಟ ಆಡೋಣ ಎಂದರೆ ನೀನು ಒಳ್ಳೆಗೋಳು ಕೊಡುತ್ತಿ."

“ಇದನ್ನು ಗೋಳು ಎಂದುಕೊಳಬೇಡ. ನಿನ್ನ ಸಣ್ಣ ಅಭ್ಯಾಸಕ್ಕೊಂದು ಅವಕಾಶ.”

“ಇರಲಿ, ಈಗ ನಿನ್ನೊಂದಿಗೆ ಆಟ ಆಡುವ ಇಚ್ಛೆ.”

“ಕೈ ಕಾಲು ಆಟವಾಡಿದರೆ ಬಾಯಿ ಏನು ಮಾಡುತ್ತೆ? ನಾಳೆ ಸುಧಾನೂ ನನ್ನೊಂದಿಗೆ ಬರುತ್ತಾಳಂತೆ. ಅವಳಿಗೂ ನಿನ್ನ ಸಂಗೀತವೆಂದರೆ ತುಂಬಾ ಇಷ್ಟ.”

“ಸರಿ ಬಿಡು, ಅನಂತರವೇ ಹಾಡೋಣ. ಎಲ್ಲಾ ಹುಡುಗಿಯರೂ ಕೂಡಿದರೆ ಹುರುಪು ಬರುತ್ತೆ.”

“ನಿನ್ನ ಕಂಠ ಮಾಧುರ್ಯ ಎಲ್ಲರನ್ನೂ ಸೆಳೆಯುತ್ತೆ. ಸೂಜಿಗಲ್ಲು ಅದು !”

ಇಬ್ಬರೂ ಕಿಲಕಿಲನೆ ನಕ್ಕು ಬಿಟ್ಟರು.

ಹುಡುಗಿ–ಸರೋಜಿನಿ ಎಲ್ಲರ ಪ್ರೋತ್ಸಾಹ ಮತ್ತು ಹೊಗಳಿಕೆಗಳಿಂದ ದಿನದಿನವೂ ತೀರಾ ಉತ್ತೇಜಿತಳಾಗಿ ಸಂಗೀತಾಭ್ಯಾಸದಲ್ಲಿ ಮುಳುಗಿಹೋಗುತಿದ್ದಳು. ಅವಳು ಬಿಟ್ಟರೂ ಸಂಗೀತ ಅವಳನ್ನು ಬಿಡದು. ನಿಂತಲ್ಲಿ ಕುಳಿತಲ್ಲಿ ಸಂಗೀತವನ್ನು ಗುಣುಗುಣಿಸುತಿತ್ತು ಕೊರಳಕಂಠ. ಶಾಲೆಯಲ್ಲಿ, ಮನೆಯಲ್ಲಿ ಸಂಗೀತ ಗೋಷ್ಠಿಯಲ್ಲಿ ಅವಳು ಮುಂದೆ.

ತಾಯಿಗೂ ಸಂಗೀತ ಮೆಚ್ಚು. ತಂದೆಗೂ ಸಂಗೀತ ಮೆಚ್ಚು.

ಸರಿ, ಸಂಗೀತ ಗುರುಗಳೊಬ್ಬರು ಬಂದರು. ಸಂಗೀತಾಭ್ಯಾಸಕ್ಕೆ ಕೊನೆಮೊದಲಿಲ್ಲ.

ಶಾಲೆಯ ಪುಸ್ತಕಗಳ ಹೊರೆಯೊಂದಿಗೆ ಸಂಗೀತ ಪುಸ್ತಕವೂ ಸೇರಿಕೊಂಡಿತು.

ಚಿಕ್ಕ ಹುಡುಗಿಗೆ ದೊಡ್ಡ ಹವ್ಯಾಸ.

o o o o

ಕಲ್ಯಾಣಿ ರಾಗವು ಅವಳಿಗೆ ಹಿಡಿಸದಿದ್ದರೂ ಅದನ್ನು ರಾಗಲಯ ಬದ್ಧವಾಗಿ ಹಾಡಬೇಕು. ಶಾಲೆಯಲ್ಲಿ ಪಾಂಡಿತ್ಯ ಪ್ರದರ್ಶನ ಮಾಡಿ ಬಹುಮಾನ ಗಿಟ್ಟಿಸಿಕೊಳ್ಳಬೇಕು ಎಂಬ ಗೀಳು ಬಲವಾಗಿ ಅಂಟಿತು. ಏಕೋ ಏನೋ ಅದು ಇತರೆ ರಾಗಗಳಷ್ಟು ಸರಾಗವಾಗಿ ಹಿಡಿಯುತ್ತಿಲ್ಲ. ಎಷ್ಟು ಅಭ್ಯಾಸ ಮಾಡಿದರೂ ತಾಳಲಯ ತಪ್ಪುತ್ತದೆ.

ಅಭ್ಯಾಸ. ಮತ್ತೆ ಮತ್ತೆ ಅಭ್ಯಾಸ. ಹಾಡಿ ಹಾಡಿ ಕಂಠವು ಬತ್ತಿತು. ಆದರೂ ಅದು ಮನೋಗತವಾಗದು. ಏಕೆ ಹೀಗೆ? ಅಭ್ಯಾಸದಲ್ಲಿ ಕೊರತೆಯಾದರೂ ಏನು ?

ಹುಡುಗಿ ಆಲೋಚನೆಗೀಡಾದಳು. ಮನಸ್ಸೆಲ್ಲ ಮುಜುಗರ.

ಸೌಭಾಗ್ಯ ಬಂದವಳೇ ಗೆಳತಿಯ ಖಿನ್ನ ಮುಖಭಾವವನ್ನು ನೋಡಿ "ಏಕೆ ಹೀಗಿದ್ದೀ?" ಎಂದಳು ಸ್ನೇಹ ಪ್ರೀತಿಗಳ ಆಗರವಾಗಿ.

"ಈಸಲಿ ಶಾಲೆಯ ಸಂಗೀತ ಗೋಷ್ಠಿಯಲ್ಲಿ ಕಲ್ಯಾಣಿ ರಾಗವನ್ನು ಹಾಡುವ ಇಚ್ಛೆ. ಆದರೆ, ಅದೇಕೋ ಹಿಡಿಸುತ್ತಲೇ ಇಲ್ಲ."

"ನೀನು ಗುರುಪೂಜೆ ಮಾಡು. ಗುರುವಿನ ಆಶೀರ್ವಾದವಿಲ್ಲದಿದ್ದರೆ ಕೆಲವೊಮ್ಮೆ ಹಾಗಾಗುವುದುಂಟು. ನಿತ್ಯ ಪೂಜೆಮಾಡುವಾಗ ಮೊದಲು ಗುರುಗಳನ್ನು ನೆನೆದು 'ಗುರುಭ್ಯೋನಮಃ' ಎಂದು ವಂದನೆ ಸಲ್ಲಿಸು. ಸಂಗೀತಾಭ್ಯಾಸಕ್ಕೆ ಕೂಡುವ ಮೊದಲೊಮ್ಮೆ ಗುರುವನ್ನು ನೆನೆಯದಿರಬೇಡ. ನಿನಗೆ ಗುರುವಿನ ಅನುಗ್ರಹ ಬರಬೇಕು ಅಷ್ಟೆ."

ಅವಳು ಕುಳಿತು ಹಾಡಿದಳೆಂದರೆ ರಾಗಮಾಲೆ ಮಾಡು ಮುಟ್ಟುತಿತ್ತು, ಜನ ಕಿವಿಗಡಚಿಕ್ಕುವಂತೆ ಚಪ್ಪಾಳೆಯಿಕ್ಕುತಿದ್ದರು. ಅವಳಿಗೆ ಸಂಗೀತ ಗೋಷ್ಠಿಯಲ್ಲಿ ಕಲ್ಯಾಣಿ ರಾಗವನ್ನು ಹಾಡುವ ಧೈರ್ಯ ಮಾತ್ರ ಇನ್ನೂ ಬಂದಿರಲಿಲ್ಲ.

ದಿನ ನಿತ್ಯ ಗುರುವಿನ ಮಾನಸ ಪೂಜೆ ನಡೆಯುತ್ತಲೇ ಇತ್ತು. ಸರೋಜಿನಿ ಭಕ್ತಿಯಿಂದ ಪುಳಕಿತಳಾಗುತಿದ್ದಳು.

ಆದರೇನು ? ಕಲ್ಯಾಣಿ ರಾಗ ಇನ್ನೂ ಮನೋಗತವಾಗಲಿಲ್ಲ ಎಂಬ ಚಿಂತೆ ಕಾಡುತಿತ್ತು. ಕಣ್ಣೀರು ಮೊಳೆಯುತಿದ್ದುವು ಕಣ್ಣುಗಳಲ್ಲಿ. ಚಿಂತಾಪರವಶಳಾಗಿ ಹಾಸಿಗೆ ಸೇರುತಿದ್ದಳು, ಹೃದಯವೂ ಭಾರ. ಮನಸ್ಸೂ ಭಾರ. ಸುಖದುಃಖಗಳ ಧಾಳಿಯಲ್ಲಿ ಸಿಕ್ಕಿ ಹುಡುಗಿ ಚಿಂತಾಖಿನಿಯಾಗಿ ನಿದ್ದೆ ಹೋದಳು. ಕನಸಿನ ಲೋಕದಲ್ಲಿ ಬೆಳ್ನವಿರಿನ ವೃದ್ಧ ವ್ಯಕ್ತಿ ಕಾಣಿಸಿಕೊಂಡರು. ಕೈಯಲ್ಲಿ ಜಪ ಮಾಲೆ. ಕೊರಳಿನಲ್ಲಿ ರುದ್ರಾಕ್ಷದ ಮಣಿ ಮಾಲೆ. ಶಲ್ಯ ಹೊದ್ದಿದ್ದಾರೆ. ಕೈಯ್ಯಲ್ಲೊಂದು ಪುಸ್ತಕ. ಅವರು ಕಣ್ಣು ಮುಚ್ಚಿ ಧ್ಯಾನಾಸಕ್ತರಾಗಿದ್ದರೇನೋ...ಏನೂ ಮಾತಾಡಲಿಲ್ಲ,

ಂ ಂ ಂ ಂ

ಮರು ದಿನ ರಾತ್ರಿಯೂ ಗುರುಗಳ ದರ್ಶನವಾಯಿತು.

ಆದರೆ, ಇಂದಿನ ವಿಶೇಷವೆಂದರೆ ಅವರು ಕಾಣಿಸು ತ್ತಲೂ ತಂಬೂರಿ ಸ್ವರ ತಂತಾನೇ ಹೊರಡಹತ್ತಿತು. ಮಿಡಿ ಯುವ ಬೆರಳುಗಳಿಲ್ಲ. ಮೂಲೆಯಿಂದ ಎತ್ತಿ ತಂದವರಿಲ್ಲ. ಸ್ವರ ಮಾತ್ರ ಹೊರಡುತ್ತಲೇ ಇದೆ.

ಮುದ್ದು ಹುಡುಗಿಗೆ ತಂಬೂರಿಯ ಹತ್ತಿರ ಹೋಗಲು ಭಯ. ಆ ವೃದ್ಧ ವ್ಯಕ್ತಿಯನ್ನು ಮಾತಾಡಿಸಲೂ ಭಯ. ಸುಮ್ಮನೆ ಡಂಗಾಗಿ ಶಿಲಾ ಮೂರ್ತಿಯಂತೆ ನಿಂತು ಬಿಟ್ಟಿ ದ್ದಾಳೆ.

"ಏಕಮ್ಮಾ ದೂರ ನಿಂತು ಬಿಟ್ಟೆ ? ಈಗ ಹಾಡು ನೋಡೋಣ."

ಸರೋಜಿನಿ ಅವರ ಎದುರಿನಲ್ಲಿ ಪದ್ಮಾಸನ ಹಾಕಿ ಕುಳಿತುಕೊಂಡಳು. ತಂಬೂರಿ ಮುಟ್ಟಲಿಲ್ಲ. ಅದರಿಂದ ಸ್ವರ ರಾಗ ಹೊರಡುತ್ತಲೆ ಇತ್ತು. ಗುರು ತಾಳ ಹಾಕುತ್ತಲೇ ಇದ್ದಾರೆ.

ಸರೋಜಿನಿ ಕಲ್ಯಾಣಿ ರಾಗದ ಆಲಾಪನೆ ಶುರು ಮಾಡಿದಳು.

ಸಂಗೀತ ಅಭ್ಯಾಸ ಸರಾಗವಾಗಿ ಸಾಗಿತು. ಹೊತ್ತು ಉರುಳಿದುದರ ಪರಿವೇ ಇರಲಿಲ್ಲ.

ಬೆಳಗಾಯಿತು. ಸರೋಜಿನಿ ಹಾಸಿಗೆ ಬಿಟ್ಟೇಳಲಿಲ್ಲ.

ತಾಯಿಯೊಮ್ಮೆ ಶಾಲೆಗೆ ಹೊತ್ತಾಯಿತೆಂದು ಎಬ್ಬಿಸಿ ಹೋಗಿದ್ದಳು. ಆದರೂ ನಿದ್ದೆಯ ಮಬ್ಬು ಹರಿಯಲೇ ಒಲ್ಲದು.

"ಸರೋಜಿನಿ..." ಕರೆದಳು ತಾಯಿ.

"......"

"ಸರೋ......ಏಳುವುದಿಲ್ಲವೇ ?

ಸರೋಜಿನಿ ಕಣ್ತೆರೆದಳು. ಮನಸ್ಸಿನ ತುಂಬೆಲ್ಲಾ ಕನಸಿನ ಚಿತ್ರ. ಬೆಳ್ಳನೆರಿನ ಗುರುದೇವ.

ಯಾರಿರಬಹುದು ? ತಾನೆಂದೂ ಕಂಡರಿಯದ ವ್ಯಕ್ತಿ ...ಕಣ್ಣುಗಳನ್ನು ಉಜ್ಜಿಕೊಂಡು ಬಿರಿಬಿರಿ ನೋಡಿದ್ದಳು. ಅಕ್ಷಿಪಟಲದ ಮೇಲೆ ಅಚ್ಚಳಿಯದು ಆ ಚಿತ್ರ.

"ಅಮ್ಮಾ, ಧವಳಾಂಬರಧಾರಿಯಾದ ಗುರುಗಳು ಯಾರಾದರೂ ನಮ್ಮಲ್ಲಿಗೆ ಬರುತಿದ್ದರೇ ?"

ತಾಯಿ ಯೋಚಿಸಿ ಹೇಳಿದಳು "ನನಗೆ ಯಾರನ್ನೂ ನೋಡಿದಂತೆ ಜ್ಞಾಪಕವಿಲ್ಲ."

o o o o

ಗೆಳತಿ ಕಾವೇರಿ ಬಂದಾಗ ಇಬ್ಬರೂ ಕೂಡಿ ಅಭ್ಯಾಸಕ್ಕೆ ಕುಳಿತರು.

ಅರೆರೆ ! ನೀನೀಗ ಕಲ್ಯಾಣಿ ರಾಗವನ್ನು ಎಷ್ಟು ಸೊಗಸಾಗಿ ಹಾಡುತ್ತಿ !" ಅಚ್ಚರಿ ಸೂಸಿದಳು ಅವಳು.

"ಹೌದು. ಈಗ ನನಗೂ ಅತ್ಯಂತ ಸಮಾಧಾನ. ಗುರುಗಳ ಪಾಠದಿಂದ ಕೈಗೂಡಿತು. ಅವರ ಆಶೀರ್ವಾದದಿಂದ ಧನ್ಯಳಾದೆ."

"ಗುರು...ಗುರುಗಳೇ ಸರ್ವ ವಿದ್ಯೆಗೂ ಆಧಾರ. ಗುರುಗಳಿಲ್ಲದೆ ಯಾವ ವಿದ್ಯೆ ಕೈಗೂಡುತ್ತೆ ಹೇಳು ?

ಎಲ್ಲಕ್ಕೂ ಗುರುಗಳು ಮುಂದಿರಬೇಕು. ಆಗಲೇ ವಿದ್ಯೆ
ಬುದ್ಧಿ ಸಂವೃದ್ಧಿ."

"ನಿಜ ಕಾವೇರಿ."

"ಗುರುಗಳ ದರ್ಶನವಾಗುವ ಮುಂಚೆ ನಿನಗೆ ಈ ರಾಗ
ಕೈಗೂಡಿರಲಿಲ್ಲ. ಹೇಗಿದೆ ನೋಡು ಗುರುಗಳ ಪವಾಡ ?"

"ಯಾವ ದೇವರ ಆಶೀರ್ವಾದವೋ ಗುರುಗಳು ಬಂದಿ
ದ್ದಾರೆ. ಇನ್ನು ಮುಂದೆ ವಿದ್ಯೆ ಸರಾಗವಾಗಿ ಹತ್ತಬಹುದು."

ಅನಂತರ ಸರೋಜಿನಿಯ ಸಂಗೀತ ವಿದ್ಯೆಯೂ ಬೆಳೆ
ಯಿತು. ರಾಗ ಮಾಧುರ್ಯವೂ ತೊಳಗಿ ಬೆಳಗಿತು. ಇನ್ನೂ
ಎಳೆಯ ವಯಸ್ಸಿನಲ್ಲಿಯೇ ಕೀರ್ತಿ ಶಾಲಿಯಾದಳು. ಹುಡುಗಿ
ಕ್ರಮಕ್ರಮೇಣ ಹಿರಿಯ ಸಂಗೀತಗಾರರ ಸಾಲಿನಲ್ಲಿ ಸೇರಿ
ಕೀರ್ತಿಶಾಲಿಯಾಗಿ ಆನಂದದಿಂದ ಸುಖ ಜೀವನ ನಡೆಸಿದಳು.

— ೦ —

# ಮಲ್ಲಿಕಾ ಕೃತಿಗಳು

(ಕವಿತಾ ಸಂಕಲನ)

೨೮) ವಿಜಯ ಗಾಥಾ
೨೯) ಗಾನ ತೀರ್ಥ
೩೦) ನಾದ ಬಿಂದು
೩೧) ಕಾವ್ಯಾನಂದ ನಂದಿನಿ
೩೨) ಭಾವಾನಂದ ನಂದಿನಿ
೩೩) ಸಂಗೀತ ಪುಷ್ಪಾಂಜಲಿ
೩೪) ಆತ್ಮ ಗೀತಾಂಜಲಿ (ಅಚ್ಚಿನಲ್ಲಿ)

(ಸಂಜೀವನ ಕಾವ್ಯ)

೩೫) ಮಂಗಳ ಭಾರತಿ
೩೬) ಕಲ್ಯಾಣ ಭಾರತಿ
೩೭) ಉತ್ತರೋತ್ತರಣಿ
೩೮) ರಾಗಾನುರಾಗಿಣಿ
೩೯) ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೦) ಪುಣ್ಯಪಯೋನಿಧಿ
೪೧) ಪುಣ್ಯಾಭಿಸಾರ

(ಸಾನೆಟ್‌ಗಳು)

೪೨) ತರಂಗಿಣಿ

(ಗದ್ಯ ಕಾವ್ಯ)

೪೩) ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೪) ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೫) ದೂರ ದೇಶದಲ್ಲಿ
೪೬) ಬೆಳದಿಂಗಳ ರಾತ್ರಿ
೪೭) ರಂಗನ ಸಾಹಸ
೪೮) ಓಹಿಯೋಜ ಸರೋವರ
೪೯) ಕೌಶಿಕನ ಗೊಂಬೆ
೫೦) ವಿಶೇಷ ಸುದ್ದಿ
೫೧) ಕಲ್ಯಾಣಿ ರಾಗಿಣಿ

---

ಲಕ್ಷ್ಮೀ ಪ್ರಕಾಶನ
170, ಲ್ಯಾಂಗ್ ಫೋರ್ಡ್ ರೋಡ್, ಬೆಂಗಳೂರು–560 025